19 ಜಗಕ್ಕೆ ಬೊಂತೆಯಮುನೀಂದ್ರಂ ವಿಶ್ವಲೋಕಸ್ತುತಂ ॥ ಅದಲ್ಲದೆಯುಂ ॥ ವೃತ್ತ ॥ ಕರಪಡದೊಳ್ಪರೆತುತ್ತಮಿರೆ ಭಿಕ್ಷೆಗೆ ಬಟ್ಟೆಯೊಳೊರ್ವ್ವನುದ್ಧತಂ ಸುರಿಗೆಯನಾಂತೆಂತಗಿ ಹಿಡಿ ಭಿಕ್ಷೆಯನೆಂದಿಱಿವನ್ತೆಗೆಯ್ವುದುಂ ಕ -

20 ರಗಿ ರಸಂಬೊಲಾ ಸುರಿಗೆ ಪಾತ್ರೆಯೊಳಿರ್ದ್ದಡೆ ಪೇರ್ದ್ದು ಪೋದೆನಟ್ಟಿರಿಯೆನೆ ಲೋಕವೇಂ ಪಿರಿಯನೋ ಮುನಿ ಬೊಂತೆಯ ದೇವನಾಜ್ಞೆಯೊಳು ॥ ವ ॥ ಅದಲ್ಲದೆಯುಂ ॥ ಕಟಕದೊಳ್ವಿಹಾರಿಸುತ್ತುಂ ಜಯಸಿಂಹದೇವರ ಮನೆಯೊಳ್ಚಕ್ರವರ್ತ್ತಿಗೆ

21 ಪುರೋವರ್ತ್ತಿಯೊಗಿರ್ಪ್ಪ ಸಮಯದೊಳು ॥ ವೃತ್ತ ॥ ಪರಸಮಯಂಗಳೊಳ್ನೆಗಱ್ದ ತಾರ್ಕ್ಕಿಕರೆಲ್ಲರುಮಿರ್ದ್ದು ನೀಂ ನರೇಶ್ವರಸಭೆಯೊಳ್ಸಮರ್ತ್ಥಿಸುವ ಕರ್ತ್ತೃವರೂಪಮದೆಂತುಟೆನ್ದು ನೂರ್ವ್ವರೊಳಮನಿತ್ತರೂಪೆನಿಸಿ ನಿನ್ದು ನಿರುತ್ತರರಾ -

22 ಗಿ ಮಾಡಿ ಬಿತ್ತರಸಿದೆನಲ್ತೆ ಬೊಂತೆಯಮುನೀಶ್ವರ ನೀಶ್ವರ ಕರ್ತ್ತೃವಾದಮಂ ॥ ವ ॥ ಅಂತು ಚಕ್ರವರ್ತ್ತಿಯ ಸಭೆಯೊಳ್ಸಕಳಸಮಯನಿರಾಕರಣಮುಖದಿಂ ಕರ್ತ್ತೃವಾದಿಚಕ್ರವರ್ತ್ತಿಯೆಂಬ ಪೆಸರಂ ಪೆತ್ತು ಮತ್ತ -

23 ಮಾ ರಾಜಧಾನಿಯೊಳು ಯೋಗೀಶ್ವರಂ ಬೊಂತೆಯಗುರು ವಿಹಾರಿಸುತ್ತುಂ ಬರೆ ॥ ಕಂದ ॥ ಮದಕರಿಯ ನೇಱೆ ಬರ್ಪ್ಪವನಿದಿರೊಳು ಕಂಡೆಲೆಲೆ ಬೊಂತೆಯ ಕಣ್ಣಿಯ ನೀಯೆಂಬುದು ಮಿಕ್ಕ ನೆಲದೊಳದನಾ ಮದಕರಿ ಬಂದೆತ್ತಿ ಮುಳ್ಗಿ

24 ಬಿಳ್ದುದು ಧರೆಯೊಳು ॥ ವ ॥ ಆದಲ್ಲದೆಯುಂ ಮತ್ತಮೊರ್ಮ್ಮೆ ತೀರ್ತ್ಥಯಾತ್ರಾನಿಮಿತ್ತಂ ನಾನಾದೇಶಂಗಳೊಳ್ವಿಹಾರಿಸುತ್ತುಂ ಬನ್ದೊಂದು ದಿವಸಂ ॥ ಕಂದ ॥ ಚರಿಯಿಸುತುಂಬರೆ ಕೊಲ್ಹಾಪುರದೊಳ್ಮುನಿ ಬೊಂತೆ ಭಿಕ್ಷೆಯಂ ಜೋಗಿ -

25 ಣಿ ಕಾಯ್ದುರಿವಂ ಬಲಿಯಂ ಪಡಿಯನೆ ಪರಿಹರಿಸದೆ ಕೊಂಡು ಕುಡಿದೆಡವಳುರಿದೆಬ್ಬಿಳು ॥ವ॥ ಮತ್ತಮನೇಕವಿಸ್ಮಯಾವಹಂಗಳಪ್ಪ ಪ್ರಭಾವಂಗಳಂ ವರ್ತ್ತಿಸುತ್ತುಮಿರ್ದ್ದೊಂದು ಸಮಯದೊಳು ॥ ವೃತ್ತ ॥ ಪರಿಹರಿಸಲ್ಕೆ ಬಾರದು ಶುಭಾಶುಭಕ -

26 ರ್ಮ್ಮಮನುಂಡಡಲ್ಲದೆ ದೊರೆಯದುವೆಂಬುದಂ ಜಗಕೆ ಬಿಚ್ಚತಮಾಗಿರೆ ಪೇಳ್ವ ಮೊಳ್ಕೆಯಿಂ ಜ್ವರಮೊಟಗೆ ತಂದು ತನ್ನೊಳಿರೆ ಕಂಥೆಯೊಳಂತದನಿಕ್ಕಿ ದೇವತಾಸ್ಮರಣೆಯೊಳಿರ್ದ್ದನೇಂ ಪಿರಿಯನೋ ಗುರು ಬೊನ್ತೆ ತಪಪ್ರಭಾವದೊಳು ॥ ಕಂದ ॥ ಬೇ -

27 ಱರಿ ರಸಾತಳದೊಳು ಧಾರಿಣಿಯೊಳ್ಮಳೆತು ದೆಸೆಗಳೊಳು ತಳ್ತು ನಭಕೋಱರಂತೆ ಪಿಳಿರ್ದು ಬಳೆವುದಹೋರಾತ್ರ[ಂ] ಕೀರ್ತ್ತಿಲತಿಕೆ ಬೊಂತೆಯಮುನಿಯುಂ(ಯ) ॥ ವಚನ ॥ ಇನ್ನು ನೆಗಳ್ತೆವೆತ್ತು ॥ ಕಂದ ॥ ನಿರುಪಮರೆನಿಸಿದ ಬೊಂತೆಯ ಗುರುಗಳ್ಗೆಣೆಮಾದಿ ಗುಣಗಣಾನ್ವಿತ -

28 ರ್ಗ್ಗೆ ಮನೋಹರರೆನಿಸಿ ಸಕಳವಿದ್ಯಾಪರಿಣತನವಧೂತದೇವನಾದಂ ಶಿಷ್ಯಂ ॥ ವ ॥ ಆ ಮಹಾನುಭಾವ[ಂ] ॥ ಕಂದ ॥ ಪಿಂಗದೆ ನಱುಗುಂದದೊಳಂ ಗಂಗೆಯೊಳಂ ಗ್ರಹಣಕಾಲದೊಳ್ಬರಿಯಿಸೆ ಲೋಕಂ ಗಂಗೆಯಯ್ಯನೆನೆ ನೆಗೞ್ದಂ ಗುಣಿಯವಧೂತ -

29 ದೇವನಭಿನವವಿಭವಂ ॥ ಪ್ರತಿವಾದಿನಿವಹದೀಪಪ್ರತತಿಪ್ರಧ್ವಂಸವಿಪುಳಝಂಝಾನಿಳಂ ಕೃತಮತಿಯವಧೂತಂ ವಿಶ್ರುತವಾಕ್ಪತಿ ಕರ್ತ್ತೃವಾದಿಮುಖಮುಕುರುಂದ ॥ ಇಂತು ನೆಗೞ್ತೆವೆತ್ತ ॥ ವೃತ್ತ ॥ ಅನವದ್ಯಂ -

30 ಗವಧೂತಯೋಗಿಗನುಜಕ್ಕೋದಾರಶಕ್ತಿ ಪ್ರಭಾವನಿಧಾನಂ ನುತಮಲ್ಲಿಕಾರ್ಜ್ಜುನನುದಾತ್ತಂ ಮೊಱೆ ಜಾಪಿಬ್ರತೀಂದ್ರನಖೌಘಿಚ್ಛಿದುದಾತ್ತಮಾರ್ಗ್ಗನಿರತಂ ನಿರ್ವ್ವಾಣಯೋಗೀಶ್ವರಂ ಜಿನವಂದ್ಯಂ ಯತಿವಾಮದೇವನನಘಂ ಯೋ -

31 ಗೀಶನಾಮಾಂಕಿತಂ ॥ ಕಂದ ॥ ನಯಮಾರ್ಗಂ ಸಿದ್ಧೇಶ್ವರನಯನಿಯಮಂ ರುದ್ರಶಕ್ತಿ ಸಕಳಕಳಾಸಂಶ್ರಯನೂರ್ಜ್ಜಿತಂ ಕ್ರಿಯಾಶಕ್ತಿಯಿವೆತ್ತಾವಾದರಖಿಳಗುಣಸಂಸೇವ್ಯರು ॥ ವಚನ ॥ ಇಂತವಧೂತದೇವ ಪ್ರಮುಖ -

32 ಶಿಷ್ಯಸಂಸೇಬ್ಯಮಾನಪಾದಾರವಿಂದರುಂ । ಪರಿವೃತಮುನೀಂದ್ರಬೃಂದರುಮಾಗಿ ॥ ಕಂದ ॥ ಶ್ರಿಜಿಯಿಸಿದರ್ಸ್ಸಕಳಗುಣಬ್ರಜಮಂ ತಂದೊಂದು ಮಾಡಿ ಕಂಥಾಚಾರ್ಯ್ಯನ್ನಿಜಮಹಿಮೆಯಿನೊಸದೆಸವಂತು ಜಗಂನುತನೆನಿಪ ವಾಮ -

33 ಶಕ್ತಿಬ್ರತಿಪಂ ॥ ವೃತ್ತ ॥ ಒಡವುಟ್ಟಿರ್ದ್ದಖಿಳಾಗಮಂ ಸಕಳತರ್ಕ್ಕಂ ಶಬ್ದಶಾಸ್ತ್ರಂ ಪೆಱಪೋರ್ದವಟ್ಟಾಗಳೆ ಚಿತ್ತದೊಳ್ಪುಗದ ಮಾತಂ ಪೇಳ್ವ ವಿಜ್ಞಾನದೊಳು ನುಡಿಯಾರಾಧಿಸೆ ಸೂರ್ಯ್ಯನೊಳ್ಪಡೆದ ತತ್ತ್ವಾಭ್ಯಾಸಮಾ ತಂದೆಯೊಳ್ಪಡಿಯಂ -

34 ಬಂತಿರೆ ವಾಮಶಕ್ತಿಯೆಸವಿಳ್ದಂ ಕರ್ತೃವಾದೀಶ್ವರಂ ‖ ವೃತ್ತ ‖ ಪರಸಮಯಂಗಳೊಳ್ನೆಗಳ್ದ ತರ್ಕದ ಮಾತುಡುಗಿತ್ತು ಕೂಡೆ ಚತ್ವರವಿಶದೇವತಾಭವನರಾಜಗೃಹಂಗಳೊಳೊಲ್ದು ಮಾಳ್ಕೆಯಿಂ ನಿರವಿಸಿ ವೇಳ್ವ ನಾಟಕದ

35 ಕಾಬ್ಯದ ನೀತಿಯು ಬಲ್ಮೆಯಲ್ಲರೊಳ್ಪರಿಹರಿಸಿತ್ತು ವಾದಿಮುಖದರ್ಪ್ಪಣನಿಂ ಸಲೆ ವಾಮಶಕ್ತಿಯಿಂ ‖ ವೃತ್ತ ‖ ಬ್ರತದೀಕ್ಷಾವಿಧಿಕುಂಡಮಂಡಳವಿಧಾನಂ ಲಿಂಗಪೀಠಕ್ರಮಂ ಪ್ರತಿಮಾದೋಷಣಪೋಷಣಂ ಭುವ

36 ನಕೋಶಂ ವಾಸ್ತು ಭೂದಿಯ್ಯಸಂಸ್ಥಿತಿ ಭೂಭೇದ ಪರೀಕ್ಷೆ ದೇವನಿವಹಪ್ರಾಸಾದಮೆಂಬಾಗಮಸ್ಥಿತ ವಿದ್ಯಾವಳಿ ವಾಮಶಕ್ತಿಮುನಿಯಿಂ ವಿಖ್ಯಾತ್ಯ ಮಾಯುತ್ತಿರ್ಪ್ಪಯೊಳು ‖ ವಚನ ‖ ಇಂತು ಸಕಳವಿದ್ಯಾ ಸಂಪನ್ನರುಂ ಭಾಕ್ತಿಕಜನ ಪ್ರ -

37 ಸಂನರುಂ ‖ ಕರ್ತೃವಾದೀಶ್ವರರುಮಾರಾಧಿತವಿಶ್ವೇಶರರುಮೆನಿಸಿ ನೆಗಳ್ತೆವೆತ್ತ ವಾಮಶಕ್ತಿದೇವರ್ಗ್ಗಾರ ಸ ಪುತ್ರರೆನಿಸಿ ‖ ಕಂದ ‖ ಜನಿಯಿಸಿದಬ್ಬೆರ್ನ್ನತ್ತಯೆಗುರು ಮನುಸಾರ್ಗ್ಗಂ ಮಲ್ಲಿಕಾರ್ಜುನಂ ಸಕಳ ಕಳಾಭಿನುತನಮರೇಶ್ವರಂ ಪಾವನಚರಿ -

38 ತಂ ರುದ್ರಶಕ್ತಿಯೆಂಬತ್ತರ್ನಯರು ‖ ಕನ್ದ ‖ ಆ ವಾಮಶಕ್ತಿದೇವರ್ಗ್ಗಾವಿರ್ಭವಿಸಿದರ್ಪ ಸುತರೊಳಗ್ರಿಮ ಸುತನುರ್ವ್ವೀನುತಕೀರ್ತ್ತಿ ಸಕಳಕ್ಷ್ಮಾವನಿಯೊಳು ರುದ್ರಶಕ್ತಿದೇವಂ ನೆಗಳ್ದಂ ‖ ವೃತ್ತ ‖ ಗುರುಕುಳವಾ -

39 ರ್ದ್ಧಿವರ್ದ್ಧನಸುಧಾಕರನಾತ್ಮಕುಳೋಲ್ಲಸತ್ಸರೋವರವರರಾಜಹಂಸನಗಜಾರಮಣಾಗಮಶೈಳಕೇಳಿಕೇ ಸರಿ ವಿಷಯಾವಳಪ್ರಭವಮೋಹಮಹಾಲತಿಕಾಲವಿತ್ರನೆನ್ದಿರಪ್ಪುದು ರುದ್ರಶಕ್ತಿಮುನಿ -

40 ಪುಂಗವನಂ ಧರೆ ಮೆಚ್ಚಿ ಬಿಚ್ಚತಂ ‖ ವೃತ್ತ ‖ ಹರೆಯದ ರೂಪಿನೇಳ್ಗೆಯೊಳಮುಬ್ಬಟೆಯಿಂ ತಪಮೆಂದು ಕಾಯ್ವನಿಂ ಸ್ಮರನಿರವೆಸ್ದಿ ಪೂಗಣೆಗೆ ಕಯ್ಪರೆ ಭೋಂಕೆನೆ ತತ್ತ್ವಪೋಗ್ನಿ ನಿಬ್ಬರಮಜೆಯುಟ್ಟ ಮುಟ್ಟೆ ಸುಡೆ ಬಿಟ್ಟಭಿಮಾನಮನೋ -

41 ಡಿ ಪೋದನೀ ಧರೆ ನಗೆ ತಂನೆನಾ ನೆಗಳ್ದ ರುದ್ರನೆನುತ್ತಮ ರುದ್ರಶಕ್ತಿಯಂ ‖ ವೃತ್ತ ‖ ರಸವರ್ಗ್ಗ ತ್ಯಾಗ ಮೇಕಾಂತರವ್ರಣಸಮಂ ಮೂರು ತುತ್ತಲ್ಲಿಯುಂ ಭೂತಸಮೂಹಕ್ಕೊಂದು ಭಾಗಂ ಬಲಿಯನೆ ನೆಗ -

42 ಳ್ದೀ ಘೋರವೀರಂ ತಪಂ ಮೋಣಿಸ ದುರ್ವ್ವಾರೇಂದ್ರಿಯೋದ್ರೇಕಮನವಿಚಳಿತೇಕಾಗ್ರಚಿತ್ತಂ ಸಮಂತ ಚ್ಚಿರ್ಸಿ ನಿಚ್ಚಂ ರುದ್ರಶಕ್ತಿ ಬ್ರತಿಪತಿ ಪಡೆದಂ ರುದ್ರನೊಳು ತಂನ ಮೆಚ್ಚಂ ‖ ವೃತ್ತ ‖ ಗುರುಧರ್ಮ್ಮಾ ಚರಣಂ ದಯಾ -

43 ನುಶರಣಂ ಶ್ರಾಗ್ಭೂತದುಃಕರ್ಮ್ಮಸಂಹರಣಂ ಸಂಶ್ರಿತಸಾಧುವರ್ಗಭರಣಂ ವಿಶ್ವೇಶ್ವರಾಂಘ್ರಿದ್ವಯಸ್ಮರಣಂ ಸರ್ವ್ವಜನೋಪಕಾರಕರಣಂ ನೋಳ್ಪಾಗಳೀ ಯಾಱುಮಾಭರಣಂಗಳ್ಸಲೆ ರುದ್ರಶಕ್ತಿ ಮುನಿಪಂಗೊಪ್ಪಿ

44 ರ್ಪ್ಪವೀ ಧಾತ್ರ(ತ್ರಿ)ಯೊಳಂ ‖ ವಚನ ‖ ಇಂತು ಸಕಳಗುಣಭರಿತನುಂ । ವೈರಾಗ್ಯನಿರತನುಂ । ಶಿವಪದ ಭಕ್ತನುಂ । ಭಕ್ತಾನುರಕ್ತನೆನೆ ನೆಗಳ್ತೆವೆತ್ತಿರ್ದ್ದ ‖ ಕಂದ ‖ ಗುರು ವಾಮಶಕ್ತಿದೇವರ ಪರೋಕ್ಷವಿನ ಯಕ್ಕೆ ರುದ್ರಶಕ್ತಿಮು -

45 ನೀಶಂ ಹರಲಿಂಗಸ್ಥಾಪನಮಂ ಧರೆ ಬಣ್ಣಿಸುವಂತು ಮಾಡಿದಂ ಪೊಂಬೊಳಲೊಳು ‖ ವ ‖ ಅನ್ತು ಪ್ರತಿ ಷ್ಠೆಯಂ ಮಾಡಿ ಕುಮಾರಬೊನ್ತೇಶ್ವರಮೆಂದು ಪೆಸರಿಟ್ಟು ‖ ವೃತ್ತ ‖ ಉದಯಿಸಿದಾತ್ಮವಂಶಮುಮ ಪಾವನ ಮಿಳ್ದ ಗುಹಾದ್ರಿದೇವ -

46 ತಾಸದನಮನಾಳ ಪಾವನತರಂ ಸಲೆ ಮಟ್ಟದ ಭೂಮಿಸಸ್ಯಸಂಪದವೆತಿ ಯೊನ್ದಿರ್ಮ ಮುಟ್ಟದ ಜಳಾಶಯ ಪೂಜ್ಯಿತ ತೀರ್ತ್ಥವೆಂಬ ಪೆಂಪೊದವಿರೆ ರುದ್ರಶಕ್ತಿಮುನಿ ತಾಳ್ದಿದನಪ್ರತಿಮಪ್ರಭಾವಮಂ ‖ ವಚನ ‖ ಆ ಮಹಾ -

47 ನುಭಾವನ ತಪಃಪ್ರಭಾವಮಿತ್ತಿದುಬ್ಬರ್ಪಮೆಂತೆಂದಡೆ ‖ ವೃತ್ತ ‖ ಕ್ಷಮೆ ತನ್ನೊಳು ಮೂರ್ತ್ತಿಗೊಂಡಂ ನತಿ ಬಳೆದು ನಯಂಗೊಂಡು ಮಿಕ್ಕಾರ್ಪ್ಪು ಕಯ್ಕೊಂಡು ಮಹತ್ವಂ ಬಣ್ಪುಗೊಂಡು ಪ್ರಭುತೆಯನೊಳ ಕೊಂಡೀಕತ್ವಂ ಮನಂಗೊಣ್ದಾ -

48 ಮಳ ಶ್ರೀಕರ್ಮ್ಮಗೊಂಡುಜ್ಜ್ವಳ ಘನಯಶಮಂ ತಾಳ್ದಿಕೊಂಡಿನ್ತು ಲೋಕೋತ್ತಮನಾದಂ ವಾಮಶಕ್ತಿ ಬ್ರತಿಪತಿತನುಜಂ ರುದ್ರಶಕ್ತಿಬ್ರತೀಂದ್ರಂ ‖ ವೃತ್ತ ‖ ಪರಮಜ್ಞಾನಧನಂ ತಪೋಧನನಭೀಷ್ಟಾರ್ತ್ಥ ಪ್ರದಾನಂ ಧನಂ ಸ್ಥಿ -

49 ರಸತ್ಯಂ ಧನನೂರ್ಜ್ಜಿತಬ್ರತಧನಂ ಶಾಂತತ್ವದೊಳ್ತದ್ಧನಂ ಪರಮಾರ್ಗ್ಗಂ ಧನನೀಶತತ್ವಧನನುದ್ಯತ್ತೇಜ ವಾದಂ ಧನಂ ಧರೆ ಮೋಕ್ಷಂ ಧನನೆಂದು ಬಣ್ಣಸುವುದು ಶ್ರೀ ರುದ್ರಶಕ್ತೀಶನಂ । ಅಂಗಜನ ಪ್ರತಾಪ ದೂಪನೊ ನಚಿ ಭಂ -

50 ಗಿಸಿ ತನ್ನೊಳಾದ ಸುಗಂಗಳ ವಾಂಛೆಯಂ ತೊರೆದುಮಿಂದ್ರಿಯವರ್ಗ್ಗದ ಬೇರಕಿತ್ತು ಮೋಹಂಗಳ
ಪಾಶಮಂ ಪರಿದು ಚಿತ್ತದೊಳೀಶನನೊಲ್ದು ತಾಳ್ದಿದಂ ಜಂಗಮರುದ್ರನುರ್ವ್ವರೆಯೊಳೊರ್ವ್ವನೆ
ಬೊಂಕೆಯ ರುದ್ರಶಕ್ತಿಗಳ್ ‖ ವ್ರಿ ‖

51 ತೀರ್ಚಿ ಪರೋಕ್ಷದೊಳ್ಪತ್ಯಗೆ ಮಾಡುವ ಸತ್ಕ್ರಿಯೆಯಂ ವಿರಕ್ತಿಮೆಯ್ವೆರ್ಚಿರೆ ಸಂಗಮಂ ತೊಱೆದು
ಪಾದುಕಮಂ ಬಲವಂದು ಭಕ್ತಿಯಿಂದರ್ಚಿಸಿ ಕೆಜ್ಜಣಬ್ಬೆಯ ಪದಂಗಳನಾಗಳ ರುದ್ರಶಕ್ತಿ ಬಂದರ್ಚ್ಚಿ
ಸುತಿರ್ಪ್ಪನೆಂದು ನಱುಗುನ್ನದ ಬೆಟ್ಟದೊಳಿರ್ದ್ದು ಸೂ -

52 ರ್ಯ್ಯನ ‖ ವೃತ್ತ ‖ ಉರಿಯೆನುಗುಳ್ವ ಬೇಸಗೆಯೊಳಿರ್ದ್ದುಜ ಕಾಯ್ದಚೆಯೊಳ್ಪಳಿಕ್ಕೆ ಪೆರ್ಮ್ಮರ ಮೊದ
ಲೊಳ್ಕಳಿಲ್ದು ಮಳೆಗಾಲದೊಳಿರ್ದ್ದು ಬಳಿಕ್ಕೆ ಶೀತಮಬ್ಬರಿಸಿದ ಮಾಗಿಯೊಳ್ಬಯಲೊಳಿರ್ದ್ದು ನಿರಾವರಣಂ
ನಿರಂತನುದ್ಧರತಪದಿಂ ತ್ರಿವರ್ಷಮಿ -

53 ರೆ ಕಂಡಿನನಾ ಮುನಿ ರುದ್ರಶಕ್ತಿಯಂ ‖ ಕಂದ ‖ ಧರೆಯೊಳ್ಪವಾಗಮಂ ವಿಸ್ತರಿಸಿರ ಪಲರ್ಗಱಿಯೆ ಪೇಳ್ದು
ಶಿವಪದಪೂಜಾಪರನಾಗಣಿಮಾದಿಗಳೊಳು ನೆರೆದಪನೀನೆನ್ದಿನನ್ತಿರೋಹಿತನಾದಂ ‖ ಕಂದ ‖ ತದನಂತರವುದಿ
ಯಿಸ ಬೋಧಮೀಪ್ತ ತದ್ಗ -

54 ರಿಯ ದುರ್ಗ್ಗಿಯಂ ಬೀಳ್ಕೊಂಡು ಮನೋಮುದದಿಂ ಚರಿಯಿಸುತಿರ್ದ್ದಂ ಸುದರ್ಶನಂ ರುದ್ರಶಕ್ತಿದೇವಂ
ಜಗದೊಳು ‖ ❂ ಆ ಮಹಾನುಭಾವನಪ್ಪ ರುದ್ರಶಕ್ತಿದೇವಂ ಶ್ರೀಮನು ಮಹಾಗ್ರಹಾರಂ ಪೊಂಬು
ಳ್ಚದಶೇಷಮಹಾ -

55 ಜನಂ ನಾಱಿರ್ಪ್ಪದಿಂಬರುಮಂ ಧರ್ಮ್ಮಾರ್ತ್ಥಂ ಪ್ರಾರ್ತ್ಥಿಸಿ ದ್ರಬ್ಯನಿವೇದನಂ ಗೆಯ್ಯಲವರ್ದ್ಧರೆ ಸಹಿತಂ
ಕುಡಲು ಪಡೆದು ಶ್ರೀಮಚ್ಚಾಳುಕ್ಯಚಕ್ರವರ್ತ್ತಿ ತ್ರಿಭುವನಮಲ್ಲ ವೀರಸೋಮೇಶ್ವರದೇವವರ್ಷದ
ಮೂಱನೆಯ

56 ಸೌಮ್ಯಸಂವತ್ಸರದ ಶ್ರಾವಣ ಸುದ್ಧ ೧೧ ಸೋಮವಾರ ಸಂಕ್ರಮಣ ವ್ಯತೀಪಾತದಂದು ಶ್ರೀ ಕುಮಾರ
ಬೊನ್ತೇಶ್ವರದೇವರಂಗಭೋಗ ನೈವೇದ್ಯ ಖಣ್ಡಸ್ಫುಟಿತ ಜೀರ್ಣ್ನೋದ್ಧಾರಕ್ಕಂ ಸರ್ವ್ವಬಾಧಾಪರಿಹಾರಂ
ಸರ್ವ್ವನಮಸ್ಯಮಾಗಿ

57 ಬಿಟ್ಟ ಭೂಮಿಯ ಪ್ರಮಾಣ ಊರ ಕೋಲ ಸಮೆಕಟ್ಟನೊಳೂರಿಂ ಬಡಗಣ ಪೊಲೆಯಮಗೆಱೆಯಿಂ ಬಡಗಣ
ನರಸಿಂಹದೇವರ ಕೆಯಿಂ ಬಡಗಲುಮ್ಪಡುವಲುಂ ಬೆಳ್ವಡೆಯ ಹೊಲದ ಮೇರೆಯಿಂ ಮೂಡಲು
ಪೊಳ್ದರ್ದ್ದ ಮತ್ತ -

58 ರಿಪ್ಪತ್ತನಾಲ್ಕು ಯಿಂತೀ ಧರ್ಮ್ಮಮಂ ನಾಱಿರ್ಪ್ಪದಿಂಬರುಂ ಸ್ವಧರ್ಮ್ಮದಿಂ ಕಾಯ್ದು ಪ್ರತಿಪಾಳಿಸಿ
ನಡಸುವರು ‖ ◎ ಶ್ರೀರುದ್ರಶಕ್ತಿದೇವರಾ ಪುಣ್ಯದಿನದಲು ಬೆಳ್ವಡೆಯ ಊರೊಡೆಯ ರಾಯರಸನ
ಮಗ ಕಾಳಮರಸ -

59 ನುಮಂ ‖ ಅಮ್ಮರಸನ ಮಗ ರಾಯರಸನುಮಂ ‖ ಧರ್ಮ್ಮಾರ್ತ್ಥಂ ಪ್ರಾರ್ತ್ಥಿಸಿ ದ್ರವ್ಯನಿವೇದನಂ ಗೆಯ್ಯಲ
ವರು ಶ್ರೀ ಕುಮಾರ ಬೊಂತೇಸ್ವರದೇವರಂಗಭೋಗ ನೈವೇದ್ಯಕ್ಕೆಂದು ಸರ್ವ್ವನಮಸ್ಯಂ ಸರ್ವ್ವಬಾಧಾ
ಪರಿಹಾರಮಾ -

60 ಗಿ ಶ್ರೀಮದಶೇಷಮಹಾಜನಂ ನಾಱಿರ್ಪ್ಪದಿಂಬರ ಸಂನಿಧಾನದಲು ಶ್ರೀರುದ್ರಶಕ್ತಿದೇವರ ಕಾಲಂ ಕಚ್ಚಿ
ಧಾರಾಪೂರ್ವ್ವಕಂ ಮಾಡಿ ಬಿಟ್ಟ ಭೂಮಿಯ ಪ್ರಮಾಣನೆಂತೆಂದಡೆ ಹೊಂಬೊಳಲ ಕೋಲ ಸಮೆಕಟ್ಟ
ನೊಳಾಪೂರ ಹೊ -

61 ಲದ ಮೇರೆಯಿಂ ಪಡುವ ಕೇಶಾದಿತ್ಯದೇವರ ಕೆಯಿಂ ಬಡಗ ಮತ್ತರಾಱು ‖ ಇನ್ತೀ ಧರ್ಮ್ಮಮಂ
ನಾಱಿರ್ಪ್ಪದಿಂಬರುಂ ಪ್ರತಿಪಾಳಿಸಿ ನಡೆಸುವರು ◎ ಇಂತೀ ವ್ರಿತ್ತಿಯಂ ರುದ್ರಶಕ್ತಿದೇವರ ಸಿಕ್ಷೆಯ
ಮಕ್ಕಳು

62 ಶ್ರೀ ಕುಮಾರ ಬೊಂತೇಶ್ವರದೇವರ್ಗ್ಗೆ ಬಿಡಿಸಿದನೆರವಾರೆಂದಡೆ ನವಿಲೂರ ಸಂಕರಬ್ಬೆ । ಕವಡರ ಚೆನ್ನಿ
ಸಟ್ಟಿ ಮೆಯ್ಯಲೊಮ್ಮತ್ತರು ‖ ಮೊಲರಮೊರಣ ಮತ್ತರೆರಡು ‖ ಧಾರವಾಡದ ಕಬ್ಬೆಮಾಕಯ್ಯ ಮತ್ತ
ರೆರಡು । ಕಬ್ಬೆಳ ಕಲ್ಲ -

63 ಯ್ಯ ಮತ್ತರೊಂದು । ಬಸ್ವರ ಬಿಲ್ಲಣ ಮತ್ತರ್ಬ[ದು] ಉಬ್ಬಚಿಯರ ಕಲ್ಲಯ್ಯ ತಮ್ಮ ಚೆನ್ದಯ್ಯ ।
ತನಯರ । ಗುಡ್ಡ । ತಂಮನ ಸಮಣ ‖ ನಿಟ್ಟಿಲ ಸಿಂಗಣ । ಜಿಂದರ ನಾಗಣ । ಕಣ್ಣಯರ ಕೇತಣ ।
ಕಲುಮರ ಕಲ್ಲಣ । ಸಿನ್ದ -

64 ವಳ್ಳಿಯ ತೆರಳಿಯ ಲಕುಮಣ । ನರಗರ ಗೌರವಿ । ನರಗರ ಚಂಪಗಾವುಂಡ । ಹಡಪರ್ಬ್ಬೆಚಣ । ಕೇಸಳರ
ಜಪನಣ । ಮಾಸಿಯರ್ಬ್ಬೆಚಣ । ಬಳೆಗಾಱ ಕೇತಣ । ಸೂಸಲ ಹೊಗರರ ನಾರಹ । ಕಮ್ಮಾಱ್ಬೆಚೋಜ ।
ನವಿಲ್ಗುಂದದುಜ್ಜಾಳಬಲ್ಲೆಯ ನಾ -

65 ಯಕಸಿನಿತ್ತವರೆಲ್ಲಂ ಮಿಯ್ಯಲೊಂಮತ್ತರಂ ಬಿಡಿಸಿದರು ॥ ◎ ಮತ್ತಮಾ ಪುಣ್ಯದಿವ[ಸ]ದಲು ಸರ್ವ್ವ ಜನೋಪಕಾರವಪ್ಪ ವ್ಯವಸಾಯಿಗಳೆನಿಸಿದ ಪೊಂಬುಳ್ಚದಱವತೊಕ್ಕಲುಂ ಪ್ರೊಕ್ಕಲಲೊಂದು ಮಾಡ ಹೊಹೆ ಬಣ್ಣಿಗೆಗೊಳಗನುಂ ಬಿಟ್ಟರ್ ॥

66 ಊರ ತಳವಾರ ನಾಯಕಂ ಮುಖ್ಯಮಾಗಿ[ಯಾ]ಳಲೊಂದು ಹೊಹೆಯಂ ಬಿಟ್ಟರು ನಕರಂಗಳು ಚೈತ್ರದಲು ಹಾಗ ಪವಿತ್ರದಲು ಹಾಗ ಸಟ್ಟುಗ ಭತ್ತ ದೇವರ ವೀಳೆಯಕ್ಕಂಗಡಿಯಲೊಂದಡಕೆ ಯೆಲೆಯಂ ಬಿಟ್ಟರ್ ॥

67 ಹಂನವಣಿಗರು ಚೈತ್ರದಲು ಬೇಳ ಪವಿತ್ರದಲು ಬೇಳೆಯಂ ಬಿಟ್ಟರು । ಕಂಚಗಾಱರು ದೇವರುಪಕರಣಂಗಳೆಲ್ಲವಂ ಕೂಲಿಯಂ ಕೊಳ್ಳದೆ ಮಾಡಿ ಕುಡುವಂತಾಗಿ ಬಿಟ್ಟರು । ಮಡಿವಳರೆಲ್ಲ ಪ್ರೊಕ್ಕಲಲೊಂದು ಹೊಹೆಯಂ

68 ಬಿಟ್ಟರು । ಕುಂಬಾಱರೊಕ್ಕಲಲೊಂದಾವಗೆ ಗಲನಂ ಬಿಟ್ಟರು । ಮತ್ತಮಾ ಪುಣ್ಯದಿವ[ಸ]ದಲೂರ ತಳವಾರ ನಾಯಕಂ ತನ್ನಲ್ಲಿ ಬಣ್ಣಗ ಭತ್ತಮುಮನಾಳೆಲಯ್ಗುಳ ಭತ್ತಮಂ ಬಿಟ್ಟರು । ಆಲದ ಸೇಣೆಗರು ಚೈತ್ರದಲು ಹಾಗ

69 ಪವಿತ್ರದಲು ಹಾಗವಂ ಬಿಟ್ಟರು ।

## No. 74

(*B.K. No.* 5 *of* 27–28)

KŌḌĪKOPPANAGUḌḌA, RON TALUK, DHARWAR DISTRICT

On a slab leaning against the wall to the left of entrance into the central shrine of Kālakālēśvara

**Sōmēśvara IV, 1194 A.D.**

This is dated the 10th regnal year of the king, Prajāpati, Kārttika-puṇṇami, Monday. The date is irregular including the wrong citation of the cyclic year. The 10th year of the king coincides with Ānanda, when the details regularly correspond to 1194 A.D., October 1, Monday. On this day there was a lunar eclipse which is not mentioned in the record.

It registers a gift of land by the king's subordinate *Mahāmaṇḍalēśvara* Āchidēva for offerings, etc., in the temple of Kaḷakaḷēśvara. The genealogical succession of the donor is given as follows: Ācharasa I, his son Bammarasa, the former's brother Singa's son, Ācharasa II, (his son) Chāvuṇḍa and (his son) Āchidēva. It becomes thus evident that this Āchidēva belonged to the Sinda family of the Erambarage branch. Cf. *Epigraphia Indica*, Vol. XX, p. 114.

TEXT

1 ✣ ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ(ಂ)
2 ಮೂಲಸ್ತಂಭಾಯ ಸಂಭವೇ ॥ ಮೇರುವಿನ ತುದಿಯೊಳೇಕನದಾರಾನಂ
3 ತಾರಾಗ್ರಿಹದೊಳು ಭಾರತಿ ಬರೆದಳು ಗೋತ್ರಾಚಾರಂ ಶಿವಯೋಗಿಕಾಮ(ಂ)
4 ನೆಂಬಕ್ಕರಮಂ ॥
5 ◎ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವ -
6 ರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ
7 ಶ್ರೀಮತ್ತ್ರಿಭುವನಮಲ್ಲ ವೀರಸೋಮೇಶ್ವರದೇವವಿಜಯರಾಜ್ಯಮುತ್ತರೋ -
8 ತ್ತರಾಭಿವ್ರಿದ್ಧಿಪ್ರವರ್ದ್ಧಮಾನ(ರ್)ನಾಚಂದ್ರಾರ್ಕ್ಕತಾರಂಬರಂ ಸ -
9 ಲುತ್ತಮಿರೆ ॥ ತತ್ಪಾದಪದ್ಮೋಪಜೀವಿಗಳು ॥ ಪೊನೆಯೊಳು ಕೂಪ್ವರ್ಂ ತೋಱು -
10 ತ್ತುವನುವರದೊಳು ಬಲದೊಳಮರುತುಂ ತ್ರಿಭುವನಮಲ್ಲನ ಕಟ್ಟಿದಲಗಿನಂತಸೆದ ಆ -
11 ಚರಸಮಂಡಳೇಶ್ವರಂ ಭೂತಳದೊಳು ॥ ಅವರೊಳಗಾಚರಸಂಗೀ ಭುವನಜನಂ ಪೊಗಳೆ ನೆ -
12 ಗಳ್ದ ಬಂಮರಸಂ ಪುಟ್ಟಿ ವಿಸೇಸ ವಿಭವಮಂ ಚಕ್ರವರ್ತ್ತಿ ಕುಡೆ ಪಡೆದನಾತ್ಮಸೌಯೌರ್ಯ್ಯೋನ್ನತಿಯಂ ॥
13 ಆತನ ತಮ್ಮಂ ಸಿಂಗಮಹೀತಳಪತಿ ಸಂಭವಂ ವಿರೋಧಿನರೇಂದ್ರ(ಂ) ಬ್ಬಿರ್ತ್ತಿಯನೆ -
14 ಯ್ದುವಿನಂ ವಿಖ್ಯಾತಂ ನೆಗಳ್ದಂ ಪ್ರತಾಪದಿಂದಾಚರಸಂ ॥ ಮರವೆಣಿಯಿಂದೆ ಗೋವಿಯ್ಯ -
15 ನುಪ್ಪಿನಕಟ್ಟಿಯ್ಯಂ ಪ್ರತಾಪದಿಂದುರಿಃ ಕಳಿಂಗ ವೆಂಗ ಮೇರು ಗೂರ್ಜ್ಜರ ಮಾಳ -

16 ವೆ ಚೇರ ಚೋಳ ಭೂಪರನಧಿಪಂಗೆ ಬಿಟ್ಟವೆಸದಿಂ ನಡಿವೊಕ್ಕರೆನಲ್ಕೆ ಮಾಡಿದಾಚರಸನೊ .
17 ಳಂಣ್ನಾ ನುತ್ತುಳದ ಟುಂಟುಕಮಂಡಳಿಕಸ್ತ್ರಮಾನಮೇ ॥ ವೀರಂ ಚಾಗವಿೀರದೆ ನ್ರಿಪಾರಾಧ್ಯಗುಣಂ
18 ಗುಣಂಗಳಪ್ಪ ನಿಜಂ ತನಗೆನೆ ಧಾತ್ರೀರಮಣಂ ತಿಳಕನೆಸದನುದಾರ ಗುಣಾಧಾರ ವೀರಚಾವುಂಡ .
19 ನ್ರಿಪಂ ॥ ❁ಸ್ವಸ್ತಿ ಶ್ರೀಮತು ಪ್ರತಾಪಚಕ್ರವರ್ತ್ತಿ ವೀರಸೋಮೇಶ್ವರದೇವವರ್ಷದ ೧೦ ನೆಯ ಪ್ರಜಾಪ-
20 ತಿ ಸಂವತ್ಸರದ ಕಾರ್ತ್ತಿಕದ ಪುಣ್ನಮಿ ಸೋಮವಾರ ವ್ಯತೀಪಾತ ಶ್ರೀ ಸ್ವಯಂಭು ಕಳಕಳೇಶ್ವರದೇ-
21 ವರ ಶ್ರೀಕಾರ್ಯ್ಯಕ್ಕೆ ಮಹಾಮಂಡಳೇಶ್ವರಂ ಭುಜಬಳಭೀಮ ಸಾಹಸೋತ್ತುಂಗ ಸತ್ಯ -
22 ರಾಧೇಯ ನುಡಿದಂತೆ ಗಂಡ ದಾನಗುಣಮಹಿಮೋನ್ನತನುಮಪ್ಪ ಆಚಿದೇವರಸ .
23 ರು ಆ ದೇವರ ನಿತ್ಯನಡಿಯ ನೈವೇದ್ಯಕ್ಕೆ ಕಾಳೇಶ್ವರದೇವರಿಂ ತೆಂಕಲು ಗದ್ದೆ ಕಂಬಂ ನಾನೂಱು ಊರಿಂ .
24 ದಂ ಮೂಡಲು ಕೆರುವನ ಗದೆಇಂ ಪಡುವಲು ಗದೆ ಕಂಬಂ ನಾನೂಱು ಕಾರಿಗಿತಿಯ .
25 ದಾರಿಯಿಂದಂ ತೆಂಕಲು ಬೆನಕನ ಬಿಟ್ಟಿದಿಂ ಪಡುವಲು ಮತ್ತರು ಹನೆರಡು ೧೨ ಕಾರ್ತ್ತಿಕದ ಪುಣ್ನಮಿ -
26 ಯಲು ಆ ಪರ್ವ್ವದ ಸತ್ರಕ್ಕೆ [ವೂ]ರಿಂ ಮೂಡಲು ಸೋಮನಾಥ ದೇವರತೋಂಟದಿಂ ಬಡಗಲು ಮತ್ತ -
27 ರು ನಾಲುಕು ೪ [॥ *]

## No. 75

(*B.K. No.* 192 *of* 1926–27)

KŌḌIKOP, RON TALUK, DHARWAR DISTRICT

On the fragment of a stone set up near the front wall of the Mūla Brahmēśvara temple

### Sōmēśvara IV

After the king's *praśasti* his feudatory of the Sinda family is described. The name of this chief, the date and other details are lost. It seems to record a gift of land as gathered from the mention of the boundaries in the obliterated portion. The epigraph is badly worn out.

TEXT

1 ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ [॥]
2 ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರ .
3 ಮಭಟ್ಟಾರಕಂ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ [ಶ್ರೀಮತ್ತ್ರಿಭುವನ ಮಲ್ಲ-]
4 ವೀರಸೋಮೇಶ್ವರದೇವ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತ .
5 ಮಿರೆ ॥ ತತ್ಪಾದಪದ್ಮೋಪಜೀವಿಗಳು ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಸ್ಸಿಂದ ಕುಳಕ .
6 ಮಳಮಾ[ರ್ತ್ತ]ಂಡ [ರಪ್ಪ] . . . . . ನ್ವಯ ಮಿಂತೆಂದಡೆ . . . . . . . . . .
7 ಯ ವನ . . . . . . . . . . .
8—11 Worn out
12 . . . ತನಯಂ . . . . . . . . . . .
13—16 Worn out
17 . . . . . ರಾಜಧಾನಿ . . . . . . . . . . .
18—31 Worn out. This portion contains references to the boundaries, apparently of the gift land.

## No. 76

(*B.K. No.* 32 *of* 1928–29)

ARASĪBIḌI, HUNGUND TALUK, BIJAPUR DISTRICT

On a stone leaning against the wall of the Hanumān temple

### Sōmēśvara IV

This record refers itself to the reign of Sōmēśvara IV who is associated with the title *Trailōkyamalla*, evidently after his father Taila III. It then introduces

a Sinda subordinate whose name is lost. The inscription is badly damaged and many other details including the date are obliterated.

TEXT

1 [ನಮಸ್ತುಂಗ]ಶಿರಶ್ಚುಂಬಿ ಚಂದ್ರಚಾಮರಚಾರವೇ ॥ ತ್ರೈಳೋಕ್ಯ ನಗರಾ -
2 [ರಂಭ ಮೂಲಸ್ತಂಭಾಯ] ಶಂಭವೇ ॥
3 . . . . . . . ನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾ -
4 [ಜ] ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾ -
5 [ಭರಣಂ] ಶ್ರೀಮತ್ತ್ರೈಳೋಕ್ಯಮಲ್ಲವೀರಸೋಮೇಶ್ವರದೇವ ವಿಜಯರಾಜ್ಯಮು -
6 [ತ್ತರೋತ್ತರಾಭಿವೃದ್ಧಿ]ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿರಲು
7 ಸ್ವಸ್ತಿ [ಸಮಧಿ]ಗತಪಂಚಮಹಾಶಬ್ದ ಮಹಾಮಣ್ಡಳೇಶ್ವರ
8 ರಿಪುಮಂಡಳಿಕ ಮದನಮಹೇಶ್ವರಂ ಕೋಟಿಯ ನೃಪಕಾಳ . . . . . . .
9 . . . ರನುಂ ವಿಳಾಸ . . . . . . . . . . . .
10 ತ್ತಮ[ಶೌ]ರ್ಯ್ಯಂ ಸಿಂದುಕುಳ[ವಾರ್ದ್ಧಿ] . . . . . . . . . .
11 ರತ್ನಾಕರಂ ಶ್ರೀ . . . . . . . . . . . ರಸೂರೆಕಾ -
12 . . . . . . . . . . . ಪರಬಳಸಾ -
13 ಧಳರುಮಪ್ಪ . . . . . . . . . . . . [ಮಂಕಂ]ದರ[1]

## No. 77

(*B. K No.* 86 *of* 1928-29)

KONNŪR, BILGI PETHA, BIJAPUR DISTRICT

On a broken stone standing in the temple of Hanumān

**Sōmēśvara IV**

The epigraph gives the genealogy of the Chālukya family from Vikramāditya VI and refers itself to the reign of Sōmēśvara IV. It then introduces his feudatory brothers Vīra Bijjala and Vīra Vikrama of the Sinda family, whose ancestry also is described. It also narrates the forbears of the king's minister and general Tējirāja of the Gautama *gōtra*. He was son of Bhāyila, grandson of Tejarāja and great-grandson of Nannapayya. The rest of the inscription giving the details of date and gift is entirely obliterated. The composition which is in Kannaḍa contains a few descriptive passages in Sanskrit.

TEXT

1 ಸ್ವಸ್ತಿ ॥ ಲಕ್ಷ್ಮೀನಾದಿವರಾಹಸ್ಯ ದಂಷ್ಟ್ರಾಗ್ರಂ . . . ತುರಂ ಯತ್ರ [ಪ್ರೋದ್ವ] . . ಳನ್ನಿಲೀಕಾಲಕ್ಷಣಂಬೋಸ್ಪ್ರ[ಯಂ]
2 ದಧೌ ॥ ಅಸ್ತಿ ಭಾರತಭೂಭಾಗೇ ಕುಂತಳಾಖ್ಯಂ ಮಹಾಕುಲಂ ಚಾಳುಕ್ಯನಾಮಧೇಯಾನಾಂ ವಿಶ್ರು -
3 ತಂ ಚಕ್ರವರ್ತ್ತಿ[ರ್]ನಾಂ॥ ರಾಜರತ್ನಾಕರೇ ತಸ್ಮಿಂನ್ನಶೇಷಗುಣಶಾಲಿನಿ ಬಹವಃ ಕ್ಷತ್ರಿಯಾಃ ಪೂರ್ವ್ವ[ಂ] ಜಜ್ಞಿರೇ ಭರತೋಪಮಾ[॥] -
4 ಸ್ವಸ್ತಿ ಶ್ರೀಮಚ್ಚಾಳುಕ್ಯಾನ್ವಯಗಗನಶರಚ್ಚಾರುಚಂದ್ರಂ ಸಮಸ್ತೋರ್ವ್ವೀ(ಂ) ಸ್ತುತ್ಯಂ ವಿಕ್ರಮಾದಿತ್ಯ ನೃಪನ(ಂ) ತನಯಂ ಕಾ -
5 ಮಿನೀಕಾಮನಸೋಲ್ಲೇಕಸೋಂ(ಸೋ)ಮಂ ಸೋಮನಂಧ್ರುದ್ರವಿಡಂ ಮಾಗಧ ನೇಪಾಳಭೂಪಾಳ ಮ[ಸ್ತಕ]ನ್ಯಸ್ತ ಶ್ರೀ ಪಾದಪದ್ಮಂ [ಸ] -
6 ಕಳಬುಧ[ನು]ತಂ ರಾಜಸರ್ವ್ವಜ್ಞಭೂಷಂ ॥ ಎನಿಸಿ[ದ] ಸೋಮೇಶ್ವರದೇವನ ಸುತನಧಿಕಂ ಪ್ರತಾಪ ಚಕ್ರೇಶ್ವರನೆಂಬ ನಗರ್ತ್ತವಡೆದ .
7 . ಳಾವನಿಯೊಳು ಜಗದೇಕಮಲ್ಲನಪ್ರತಿಮಲ್ಲ ತದನುಜನುದಾರವೀರರ ಸ[ದ]ನಂ ರಿಪುನೃಪಾಳ ಮದಗಜ . . .

[1] The rest of the inscription is obliterated.

8 ದುರ ನಿಜಖಡ್ಗಹರಿಯೆನಿ[ಪ]ದಿಟಂ ತ್ರೈಳೋಕ್ಯಮಲ್ಲ ನೂರ್ಮ್ಮಡಿಭೂಪಂ ‖ ಸ್ವಸ್ತಿ ಸಮಸ್ತಭೂ (ಭು)ವನಾಶ್ರಯಂ ಶ್ರೀ ಪೃಥ್ವೀವಲ್ಲಭ-

9 ಮಹಾರಾಜಾಧಿರಾಜಪರಮೇಶ್ವರಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮ(ಂ)ನ್ನೂ(ರ) ರ್ಮ್ಮಡಿ ತ್ರೈಳೋಕ್ಯಮ[ಲ್ಲದೇ]-

10 ವರ ಪ್ರಿಯಪುತ್ರನಪ್ಪ ವೀರಸೋಮೇಶ್ವರದೇವನ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧ ಮಾನ[ಮಾಚಂ]-

11 ದ್ರಾರ್ಕ್ಕತಾರಂ ಸುಖಸಂಕಥಾವಿನೋದದಿಂ ರಾಜ್ಯಂ ಗೆಯ್ಯುತ್ತಮಿರೆ ‖ ತತ್ಪಾದಪದ್ಮಭಕ್ತಿಸಮುತ್ಪಾದಿತ ವಿತ . .

12 ರ್ತ್ತಿರಿಪುನೃಪಧಾತ್ರೀಚ್ಛತ್ರಪ ಸಮಸ್ತಪುಣ್ಯ ಸಮುತ್ಪನ್ನಂ ವೀರಬಿಜ್ಜಳರೋರ್ವ್ವೀಪಾಳಂ ‖ ಆ ವೀರ ಬಿಜ್ಜಳಕ್ಷೋಣೀವಲ್ಲಭನಾನ್ವಯ .

13 ದ್ಯಮಂಕದ ವಿಶ್ವೋರ್ವ್ವೀವಿದಿತವಾದ ಕೀರ್ತ್ತಿವ್ಯಾವರ್ಣ್ಣನ ಶೋಭೆ ತಾನದೆಂತೆನೆ । ಮತ್ತಂ ನರಪತಿ ಗಲ್ಲ ಕಟ್ಟಿದಲಿಗಾಚರ[ಸ]

14 . . . . . ರೋದ್ಧ್ಯನಂ ಪರತನು ನಾಳಭೂಮಿಂಪತಿಸಿಂಗರಸಂ ಕಲಿ . . [ಪಾ]ರ್ತ್ಥನಂ ಕರಮೆಸೆ ದಿಪ್ಪ ದಾಸರಸನ -

15 ಗ್ಗದ ಬಾಡ[ರಸ]ಂ ಯಶಸ್ವಿ ಚಾವರಸನೆನಿಪ್ಪ . . . . . . . . ಯಮಾದಿ ಭೂ(ಭೂಭು) ಭುಜರುಂ ‖ ಸಿರಿಯಾ -

16 ಚರಸನ ತನುಜ[ಂ] ಪರ[ಪಾ]ರ್ತ್ಥ[ವ]ಸ್ಯನ್ಯಹರಿ . . . ಸಂ ಸಿಂಗರಸನ ಪ್ರೇಕಳಪುತ್ರಂ ಪರಿಸಂಕ್ಷಿಪ ರೂಢಯೋಧಮ-

17 ನಾಚರಸಂ ವೀರಂ ವಿದ[ಗ್ಧ]ವಿಭುಧಾಧಾರಂ ಶೌರ್ಯ್ಯಾರ್ಜ್ಜಿತೋರ್ಜ್ಜಿತಾಖಿಳರಾಜ್ಯಂ ಚಾರುತರ ಕೀರ್ತ್ತಿ ನೆಗಳ್ದಂ ವೀರಗುಣಂ ಸುಪ್ರತಾಪ -

18 ಚರಿತಚಿತ್ತಂ ಪೆರ್ಮ್ಮಾಡಿಭೂಪನ(ನು)ತ್ತಮರೂಪಂ ‖ ಪೆರ್ಮ್ಮಾಡಿದೇವನನತಿನಿರ್ಮ್ಮಳಕೀರ್ತ್ತಿಪ್ರಕಾಶಿ ತಾಷ್ಟದಿಗಂತಂ ಧರ್ಮ್ಮಯು -

19 ತನುಗ್ರಸಂಗರಕರ್ಮ್ಮಟನಾನಂದಮೂರ್ತ್ತಿ ಚಾವುಂಡನೃಪಂ ‖ ಆತನ ನಂದನನಭಿನವಚೇತೋಜಾತಂ ಸತೀಜನಚಳಿತವಚನನೂ -

20 ತನ [ರ]ಳೆಂಸುತನತಿವಿಖ್ಯಾತಿಯುತಂ ವೀರಬಿಜ್ಜಳ [ನೃ]ಪಾಲ[ಂ] ‖ ತದನುಜನಗಣ್ಯಪುಣ್ಯಂ ಸದಮಳವಿಖ್ಯಾತಕೀರ್ತ್ತಿ -

21 ಮೂರ್ತ್ತಿಮೊಕಟಂ ಕದನಪ್ರಚಣ್ಡನನುಪಮ . . . . ಸಿಂದಕುಳ ವೀರವಿಕ್ರಮದೇವಂ ‖ ಶ್ರೀಮ ಚ್ಚಾಳುಕ್ಯ -

22 ಚಕ್ರವರ್ತ್ತಿ ವೀರಸೋಮೇಶ್ವರದೇವನ ಮಹಾ . . . ತೇಜಿಮಯ್ಯದಂಡನಾಯಕನನ್ವಯಾವ ತಾರಮೆಂತೆಂದಡೆ ‖ ಗೌತಮಗೋ -

23 ತ್ರಪ್ರಭವಂ ನೀತಿವಿದಂ ಮಂತ್ರಶಕ್ತಿಸಾ[ಧಿ]ತವೈರಿಜಾತಂ ವಿದಗ್ಧವಿಬುಧಪ್ರೀತಿಕರಂ ನಂನಪಯ್ಯ ದಂಡಾಧೀಶಂ ‖ ನಂನಪದಂಡೇಶಸುತಂ

24 ಸನ್ನುತಚಾರಿತ್ರಯುಕ್ತನುತ್ತಮಗುಣಸಂಪನ್ನಂ ವದಾನ್ಯನೌದಾರ್ಯೋರ್ಜ್ಜಿತಕಂ ತೇಜರಾಜದಂಡಾ ಧೀಶಂ ‖ ತೇಜಚಮೂಪನ ತ-

25 ನಯಂ ರಾಜೀವಸಮಾನನೇತ್ರನಮಳಯಶೋವಿಭ್ರಾಜಿತನಾಶ್ರಿತಜನಸುರಭೂಜಂ ಭಾಯಿಲಚಮೂಪನ ಪ್ರತಿ -

26 ರೂಪಂ ‖ ಪೀತವಸನಚರಿತದ ಭಾಗಲದೇವಿಗೆ ಪತಿ ಭಾಯಿಪಯ್ಯ ದಂಡೇಶಂ ಗೌರೀವರವರದಿಂ ಪಡೆದಂ ಶ್ರೀವಿದನ ಚಿ[ಕ್ಕ]ತೇ[ಜ]-

27 ದಂಡಾಧಿಪನಂ ‖ ಚೀಲಾದೇವಿಯ ದಯಿತಂ ಶೀಲಯುತಂ ಭಾಯಿದೇವನಂ ಸಿ[ದ್ಧ]ನುಪಂ ಲೀಲೆಯಸುತ

28 ಶ್ರೀಲಲಿತಂ ಚಿಕ್ಕತೇಜದಂಡಾಧೀಶಂ ‖ [ಪದ್ಯ] ‖ ಜಿತರತಿಪತಿರೂಪ[ಃ] ಸ್ತುತ್ಯನಿತ್ಯಪ್ರತಾಪಃ ಸಕಳ ಸುಕವಿಪಾಲಃ ಸ-

29 ತರ . . ಕಂಜಃ [ಚಾಮ] . . . . ವಿಜ್ಞೈ ಕ್ರಿತೆಪಪದಭಾವಃ ಕೀರ್ತ್ಯರ್ತೇ ತೇಜದೇವಃ ಸ್ವಸ್ತಿ . . . . . .

30 ನಾಶ್ರಯಂ . . . . . . . . . . . . . ಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರ

31 . . . . . . . . [ಪ್ರರ] ನೆಲವೀಡಿ[1]

## No. 78

(*B. K. No.* 6 *of* 1930-31)

HULBENCHI, BAGEVADI TALUK, BIJAPUR DISTRICT

On a slab set up in front of the temple of Hanumān

### Sōmēśvara IV

This record refers itself to the reign of Sōmēśvara IV whose victory over his adversaries including the Kalachuris is described. It then introduces the king's subordinate Kumāra Bammarasa-daṇḍanātha who is credited in a lengthy *praśasti* with victory over the Hoysaḷas, the Chōḷas of Velnāḍu and the king of Māḷava. The epigraph is broken and the other details are lost.

TEXT

1 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾ . . . . . . . . . .

2 ಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಸ್ರೀಮತ್ ವೀರಸೋ[ಮೇ] . . . . . . . . . . .

3 ಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತ . . . . . . . . . .

4 ಚಕ್ರೇಶನ ಬಲುಂಪನದೇವೇಳ್ವುದೋ ವೈರಿಭೂಭೃದ್ಬಳವುಂ ಮಾರ್ಕ್ಕೊಂಡು ಸಂಗ್ರಾಮದೊಳಭಘ . . . . . . . . . . .

5 ಘಂಗಳನುದ್ವೃತ್ತಬಗ್ಗದಿಂದಂ ತಱಿದು ಕಳಚುರಿದೋರ್ಹರಂ ಕೊಂದು ಧಾತ್ರೀತಳಮಂ ಕೈಕೊಂಡು . . . . . . . . . . .

6 ಮೇಶಭೂಪಂ ‖ ಲಾಳನ ಚೋಳನ ಚೇರನೃಪಾಳನಜೆಯಟ್ಟಿ ಮುಟ್ಟಿಕಪ್ಪಂಗೊಂಡ ಮಾಳವ . . . . . . . . . .

7 ಲಾಮನೆನಿಪ್ಪ ಸೋಮನೃಪಾಳಂ ‖ ◎ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಪ್ರಚಂಡ ದಂಡ . . . . . . . . . .

8 ನಾಯಕಂ ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಮಹಾಪಸಾಯಿತಂ ಬಾಹತ್ತರ ನಿ[ಯೋ] . . . . . . . . . .

9 ದಂಡನಾಥಮಸ್ತಕಶೂಲಂ ರಿಪುಕುಳಕಾಲ ರಾಯದಂಡನಾಥಕುಮಾರ ಗಂಡಪೆಂಡಾರಂ ವಿಕ್ರೈಕ . . . . . . . . . .

10 ವ ಕುಮಾರರ ಗಂಡ ಗರ್ವ್ವಮಂ ಕಲಕುವಂ ಮುಳಿವರನ ಮಂಕುವಂ ಹೊಯ್ಸಳದಿಶಾಪಟ್ಟಂ ಆದಿ . . . . . . . . . .

11 ಕನಿವಳಪಟ್ಟ[ಂ] ಅಲ್ಲುವಿಲ್ಲವೆಲ್ನಾಡಚೋಳೆಯಸರ್ವ್ವಸ್ವಸೂರೆಕಾಱಂ ಗಂಡರೊಳ್ನೀಱಂ . . . . . . . . . .

12 ಲಂಗೊಂಡಂ ಮಾಳವರಾಯಕಾಳದಂಡಂ ನುಡಿದಂತೆ ಗಂಡಂ ವೀರಡಿಗರ ತಲೆಗೊಂಡಂ ವಿಷಮಹ . . . . . .

13 ಖಾರೇವಂತಂ ವೀರಲಕ್ಷ್ಮೀಕಾಂತಂ ಆರೋಹಕಭಗದತ್ತಂ ಪರರೊಳುದ್ವೃತ್ತಂ ಸುಭಟರೊಡ್ಡಿ . . . . . . . . . .

14 ಪರನಾರೀಸಹೋದರಂ ಶರಣಾಗತವಜ್ರಪಂಜರಂ ಮಂತ್ರಿಚೂಡಾಮಣಿ ಸುಭಟ . . . . . . . . . . .

---

[1] The rest of the inscription is lost.

15 ರಕಂ ಸೋಮನಾಥಪಾದಾರಾಧಕಂ ರಣರಂಗಭೀಮಂ ಚಲದಂಕರಾಮಂ ಕಳಚುರಿಯ . . . . . . . . . .

16 ರಾಜ್ಯೋದ್ಧರಣಂ ನಾಮಾದಿ ಪ್ರಶಸ್ತಿಸಹಿತಂ ಶ್ರೀ[ಮ]ತ್ಕುಮಾರಂ ಬಂಮರಸದಂಡನಾ . . . . . . . . . .

17 . . . . . . . . . . ಭಟಕೋಟಿಯನುದ್ಧ್ವಸಿದಂ ಭುಜಬ[ಳದಿಂದೆ ತಾಂ ಕಲಿ] . . . . . . . . . .

## No. 79

(*B. K. No.* 270 *of* 1927-28)

KIRSŪR, BAGALKOT TALUK, BIJAPUR DISTRICT

On a fragment of a slab built into the wall of the Rāmaliṅga temple

**Circa 11th Century**

The inscription commences with the Chālukya *praśasti* which is partly preserved, the king's name being lost. It introduces a member of the Sinda family of Bāgaḍage whose name, however, is missing. It mentions Kūṇḍi Three Thousand. The record is fragmentary and all other details are lost.

TEXT

1 . . . . . . . . . . ರಣಾಕರವೇ ತ್ರೈಳೋಕ್ಯನಗರಾರಂಭ ಮೂಲಸ್ತಂಭಾ.
2 . . . . . . . . . . ಶ್ರಯ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರ -
3 . . . . . . . . . . ಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀ -
4 . . . . . . . . . . ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನ -
5 . . . . . . . . . . ರೆ || ತತ್ಪಾದಪದ್ಮೋಪಜೀವಿ || ◎
6 . . . . . . . . . . ಮಣ್ಡಳೇಶ್ವರಂ ರಿಪುನೃಪತಿಕರಿಕುಂಭಿಕುಂ -
7 . . . . . . . . . . ತ ದಕ್ಷಿಣದೋರ್ದ್ದಣ್ಡನು[ಭ]ಯಬ -
8 . . . . . . . . . . ದ್ರಿಸ್ಥಿತ . . ಕುಳ[ತಿಳಕಂ] ಸ್ವರ್ಣ್ನಚ್ಛತ್ರಂ -
9 . . . . . . . . . . [ಭೋ]ಗಾವತೀ ಪುರವರಾಧೀಶ್ವ -
10 . . . . . . . . . . ಶ್ರೀರಾಂಘನಮನೋಜಂ ಸಿನ್ಧ . .
11 . . . . . . . . . . ನಿತಾಜನ . . . . . .
12 . . . . . . . . . . ಸಾಸಿರ ಕೂಂಡಿ ಮೂಸಾಸಿರ . .
13 . . . . . . . . . . ವಿಶಿಷ್ಟಸ್ರುತಿಪಾಳನೆಯಿಂ . .
14 . . . . . . . . . . ಗೇಂದ್ರೇರ[ಂ]ದ್ರ ಫಣಾಮಣಿ -
15 . . . . . . . . . . ಮಕಾನನ[1]

## No. 80

(*B. K. No.* 243 *of* 1927-28)

SHIRŪR, BAGALKOT TALUK, BIJAPUR DISTRICT

On the south wall of the Siddhēśvara temple

**1100 *A.D.***

This is dated the 24th Chālukya-Vikrama year, Pramādi, Phālguṇa ba.5, Sunday. The details correspond to 1100 A.D., March 2, the weekday being Friday.

It records a gift of land by Prasannarāsi-paṇḍita, the *āchārya* of the Siddhēśvara temple, to the tank called *Bāchiseṭṭiya-kere*.

TEXT

1 ಸ್ವಸ್ತಿ ಶ್ರೀ ಚಾಳುಕ್ಯ ವಿಕ್ರಮವರ್ಷದ ೨೪ನೆಯ ಪ್ರಮಾದಿ ಸಂವತ್ಸರದ ಫಾಲ್ಗುಣ ಬಹು -
2 ಳ ೫ ಆದಿತ್ಯವಾರದಂದು ಶ್ರೀ ಸಿದ್ಧೇಶ್ವರ ದೇವರ ಸ್ಥಾನದಾಚಾರ್ಯ್ಯ ಪ್ರಸನ್ನರಾಸಿ -

[1] The stone is broken at this point and the continuation is missing.

3 ಪಣ್ಡಿತದೇವರು ದೇವರ ಪೊಲದೊಳಗೆ ಬಾಚಿಸೆಟ್ಟಿಯರ ಕಱೆಗೆ ಬಿಟ್ಟ ಕಱೆಯ ಕೞಗ -
4 ಈ ಕೆರಿಯ ಕೆಯಿ ಮತ್ತರು ೪ [॥*]

## No. 81

(*B. K. No.* 79 *of* 1928–29)

GALGALI, HUNGUND TALUK, BIJAPUR DISTRICT

On a broken stone built into the wall of a house near the Parvatēśvara temple

### 1101 A.D.

This is dated the Vīra-Vikrama year 26, Vṛisha śu. 1, Sunday, the month possibly being Pushya. Vīra-Vikrama year evidently stands for the Chālukya-Vikrama year. In the said cyclic year, śu. 1, Sunday occurred only in the month of Adhika Bhādrapada, though in Pausha, śu. 1, commencing on Sunday, ended on Monday. The details may be equated to 1101 A.D., July 28, taking the month to be Adhika Bhādrapada.

The epigraph seems to commemorate Kannasetti who died in a defensive fight against the aggressors. It mentions Tarddavāḍi-nāḍu and Niḍuvaṇe. The inscription is damaged and fragmentary.

TEXT

1 ವೀರವಿಕ್ರಮ ವರ್ಷದ ೨೬ ನೆಯ ವಿಷ ಸಂವತ್ಸರದ [ಪು] .
2 ಶುದ್ಧ ಪಾಡಿವ ಆದಿವಾರದಂದು ತರ್ದ್ದವಾಡಿ ನಾ . . .
3 ನಿಡುವಣೆಯ ಮೇಲಾಳಿಕೆಯ . . . . .
4 ಲ್ಕೆ ದುಪೆಯುೞ್ಗವಾಗ ಕನ್ನಸೆಟ್ಟಿ ಕಾದಿ . . . .

## No. 82

(*B. K. No.* 166 *of* 1928–29)

NĪLGUND, BADAMI TALUK, BIJAPUR DISTRICT

On a hero-stone in front of the Rāmaliṅga temple

### 1106 A.D.

This is dated the Chalukya Vikrama year 31, Vyaya, Srāvaṇa śu. Thursday. If the lost *tithi* is *daśami*, the details correspond to 1106 A.D., July 12.

It seems to record the death of Chāvagāvuṇḍa and Holligāvuṇḍa in a fight against the forces of Chāgaladēvī, wife of a chief of Toṛagale.

TEXT

1 ಸ್ವಸ್ತಿ ಶ್ರೀ ಚಾಳುಕ್ಯ ವಿಕ್ರಮ ವರ್ಷದ ಮೂವತ್ತೊಂ[ದನೆಯ ವ್ಯ]ಯ ಸಂವತ್ಸ[ರದ ಶ್ರಾವಣ] ಸುದ್ಧ . . ಬ್ರಿಹಸ್ಪತಿವಾರ -
2 ದನ್ದು ಶ್ರೀಮನ್ಮಹಾಸಾಮನ್ತಂ ತೊಱಗೆಲೆಯ ದಣ್ಡ . . . ಸಮೇತಂ . . ಭೆಯಪ್ಪ [ಚಾ]ಗಲದೇವಿ [ದಾ]ೞಿಯಿಟ್ಟು
3 ನಿ . . . . . . . . . . ಗ್ರಾಮಂ ಮಾಡೆ . . ಚಾವಗಾವುಣ್ಡ . . . . [ಹೊ]ಲ್ಲಿಗಾವುಣ್ಡನು ಕಾದಿ ಸುರ -
4 ಲೋಕಪ್ರಾಪ್ತರಾ[ದರು] @ ಸರಸ್ವತೀ ಗಣದಾಸಿ ರೂವಾ . . ಬ್ರಹ್ಮೋಜನ ನೊಡಿದ ಕೆಲಸಾ ⊕

## No. 83

(*B. K. No.* 41 *of* 1929–30)

LOṬGĒRI, MUDDEBIHAL TALUK, BIJAPUR DISTRICT

On a stone near the tank

**1121 A.D.**

This is dated the Chālukya-Vikrama year 46, Plava, Jyēshṭha śu. 2 Sunday, Dakshiṇāyana-saṅkramaṇa. The Saṅkramaṇa occurred on Āshāḍha śu. 9 of the year, corresponding to 1121 A.D., June 26, which fell on a Sunday. This seems to be the intended date. Otherwise the given details correspond to 1121 A.D., May 20.

It seems to record a gift of land to a god by *Mahāmaṇḍalēśvara* Pemmāḍi. It mentions Dēsura Bammaya-nāyaka. The inscription is damaged.

TEXT

*First side*

1 ಸ್ವತಿ(ಸ್ತಿ) ಶ್ರೀಮತು ಚಾಳುಕ್ಯ ವಿಕ್ರ -
2 ಮ ವ[ರ್ಷ]ದ ನಾಲ್ವತ್ತಾಱನೆಯ ಪ್ಲ -
3 ವ [ಸಂ]ವಚ್ಛರದ ಜೇಟ್ಟ ಸುದ್ಧ ಬಿದ[1] ಗೆಯು
4 [ಆದಿ]ವಾರ ದಕ್ಷಿಣಾಯನ ಸಂಕ್ರಮಣ ವ್ಯತೀಪಾತದಂ[ದು]
5 ಶ್ರೀಮನು ಮಹಾಮಣ್ಡಳೇಸ್ವರ ಪೆಮ್ಮಾಡಿಯರಸ . . .
6 ಯ[ರ] ಶ್ರೀಮತು ದೇಸುರ ಬಮ್ಮಯನಾಯ[ಕ] . . .
7 ಯಂ ಹೊಲದ ತಂನ್ನ ಪೂರ್ವ್ವವೃತ್ತಿಯೊ . . . . .
8 [ಜೆಯ]ಮಾಲಸ್ಥಾನ ಗೋವಿಂ . . . . . .
9 ಗ್ಗೆ ಕೊಟ್ಟ . . . . . . . . . .
10 . . ಗೇರಿ ಪಡುವಲು . . . . . . . . . .
11 . ತ ಸರ್ವ್ವ ನಮಸ್ಯವಾ . . . . . . . . . .
12 . . . ಮಹಾಮ . . . . . . . . . . .

*Second side*

13 ಪ್ರಿಯದಿಂದಿನ್ತಿ ದನೆಯ್ದೆ ಕಾ -
14 ವ ಪುರುಷಂಗಾಯುಂ
15 ಮಹಾಶ್ರೀಯುಮಕ್ಕು
16 ಯಿದ ಕಾಯಂದ ಕಾಯ್ವ
17 ಪಾಪಿಗ ಕುರುಕ್ಷೇತ್ರದೊಳು
18 ವಾರಣಾಸಿ[ಯೊ]ಳು ಕೋಟಿ ಮುನೀಂ -
19 ದ್ರ[ರಂ] ಕವಿಲೆಯುಂ ವೇದಾಢ್ಯರಂ
20 [ಕೊಂದು]ದೊಂದಯಸಂ ಸಾ[ಗ್ಗ]ಮಿ -
21 Damaged

## No. 84

(*B. K. No.* 210 *of* 1926-27)

KURHAṬṬI, RON TALUK, DHARWAR DISTRICT

On a stone set up close to the front wall of the Sōmēśvara temple

**1128 A.D.**

This is dated the Chālukya-Vikrama year 52, Kīlaka, Vaiśākha śu. [10], Wednesday, corresponding to 1128 A.D., April 11.

It seems to register a gift of land. The record is worn out and the details are lost.

[1] The letter ದಿ is written below the line.

TEXT[1]

1 ರಾಂತರಗತೋಯಸ್ಯ ಮೇರುಃ ಕಣಕಣಾಯತೇ ||
2 ಸ್ವಸ್ತಿ . . . . . . . . . . .
3—7 Damaged
8 ◎ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷದ [೫೨] ನೆಯ ಕೀಲ-
9 ಕ ಸಂವತ್ಸರದ ವೈ[ಶಾ]ಖ ಸುದ್ಧ [೧೦]ಮಿ ಬುಧವಾರ ಸ-
10 ರ್ವ್ವನಮಸ್ಯ . . . . . . . . . . . ದಾ[ರ]ಣಂ
11 ಬಡಗಲು . . . . . ಕೆಯ್ಯನಾಚಂದ್ರಸ್ಥಾಯಿ -
12 ಯಾಗಿ ಕೊಟ್ಟ . . . . . . . . . . . ಸಾಮಾನ್ಯ -
13 Damaged
14 ಸ್ವಧರ್ಮ್ಮದಿಂ ಪ್ರತಿಪಾಳಿಸಿದರ್ಗ್ಗೆ ಗಂಗೆ ವಾರಣಾಸಿ ಕು -
15 ರುಕ್ಷೇತ್ರಮೆಂಬ ಅರ್ಗ್ಘ್ಯ ತೀರ್ತ್ಥಸ್ಥಾನದೊಳ್ ಏಕಕೋಟಿ ತಪೋಧ[ನ] -
16 ರ್ಗ್ಗಂ ಸಾಸಿರ್ವರು ಬ್ರಾಹ್ಮಣರ್ಗ್ಗೆ ಸಾಯಿರ ಕವಿಲೆಯುಂ ಕೋ -
17 ಡುಂ ಕೊಳಗುಮಂ ಪೊನ್ನೊಳು ಕಟ್ಟಿಸಿ
18 . ಪಿರಸು ದಕ್ಷಿಣೆಯುಂ ಕೊಟ್ಟ ಫಲ || ಈ ಧರ್ಮ್ಮಮನ -
19 ಳಿದಾತಂಗೆ ವಾರಣಾಸಿಯಲು ಏಕಕೋಟಿ ತಪೋಧನರು -
20 ಮಂ ವೇದಪಾರಗರಪ್ಪ ಬ್ರಾಹ್ಮಣರುಮಂ ಕವಿಲೆಯ್ಮಂ ಕೊ -
21 ನ್ದ ಪಾತಕರು || ಮತ್ತಂ ಮಹಾದೇವರ ಕೆಯಿಂ ಮೂಡಲು [ಭೆಳಾ] -
22 ರಿಗೆ ಮತ್ತ[ರೊಂದು] ಹೊಲಗಲ್ಲ [ಬೇಚ]ಮಯ್ಯ ಹೊಂಗೆ -
23 . . . . . ನ್ನಿನಿತಕ್ಕಂ ರೆಬ್ಬಗೋವೆನೊಡೆಯಂ ||
24 ಈ ಧರ್ಮ್ಮಮ ಪ್ರತಿಪಾಳಿಸಿದವರ್ಗ್ಗೆ ಅನನ್ತಫಲಂ ||

## No. 85

(*B.K. No* 17 *of* 1928-29)

AIHOḶE, HUNGUND TALUK, BIJAPUR DISTRICT

On a slab lying in the Jyōtirliṅga temple

**1136 A.D.**

This is dated the Chālukya-Vikrama year 61, Naḷa, Srāvaṇa śu. 12, Sunday, Saṅkramaṇa, corresponding to 1136 A.D., July 12. No Saṅkramaṇa, however, occurred on that day.

It records a gift of land to the goddess Abbukabbe of Ayyavoḷe by Chaṭṭimeya and another person. Some more gifts to the same deity by Eraṇḍara Bammiyaṇa are mentioned. Ayyavoḷe, *i.e.*, Aihoḷe is described as *Mahākāśi*.

TEXT

1 ಸ್ವಸ್ತಿ ಚಾಳುಕ್ಯ ವಿಕ್ರಮ ವರ್ಷದ ೬೧ ನೆ-
2 ಯ ನಳ ಸಂವತ್ಸರದ ಶ್ರಾವ -
3 ಣ ಶುದ್ಧ [೧೨] ಆದಿವಾರ ಸಂಕ್ರ -
4 ಮಣ ವ್ಯತೀಪಾತ[ದಂ]ದು ಶ್ರೀಮನ್ಮ -
5 ಹಾಕಾಸಿ ಅಯ್ಯಾವೊಳೆಯ ಅಬ್ಬುಕ -
6 ಬ್ಬೆಯ ದೇವಾ[ಗೆ] ಚಟ್ಟಿಮಯಂ ಬಸೆ -
7 ಬಮ್ಮಿಯಣಂ . . ಬಿಟ್ಟಿಯ ಬಾ -
8 ಗಿನಲು ಬಿಟ್ಟ ಕೆಯಿ ಮತ್ತರು ನಾ -
9 ಲ್ಕು || ಎರಣ್ಡರ ಬಮ್ಮಣ ಗೋವಿಯ
10 ಕೆಱೆಯಿ[ಂ] ಮೂಡಣ ಬಿಟ್ಟ ಕೆ -

[1] The beginning is lost.

11 ಯಿ ಪೆತ್ತರು ಮೊಱಬಾ ತಿಪ್ಪಂಬಿ .
12 [ಟ್ಟ]ರ . . . . . ಮತ್ತ[ರು] ಬಾ . .
13 . . . . . ಕೆಯಿ ಮತ್ತರು
14 ಹನ್ನೆರಡು [ಈ] ಧರ್ಮ್ಮವಂ ಪ್ರ -
15 ತಿಪಾಳಿಸಿದವರ್ಗ್ಗೆ ಗುರುಕ್ಷೇ -
16 ತ್ರ ಪ್ರಯಾಗೆ ವಾರಣಾಸಿ
17 ಅರ್ಘ್ಯತೀರ್ತ್ಥದಲಿ ಸಾಸಿರ ಕವಿಲೆ -
18 ಯುಮಂ ವೇದಪಾರಗರಪ್ಪ ಸಾ -
19 ಯಿರ ಬ್ರಾಹ್ಮಣರುಮಂ . .
20 ಸಿದ ಫಲಮಕ್ಕು ಇನ್ತೀ ಧಮ್ಮ[ರ್]-
21 ಮಂ ಕಿಡಿಸಿದವಂ ಮಹಾ ಪಾ -
22 ತಕನಕ್ಕು ‖ ◎ ಎರಣ್ಣಾರ ಬಸ್ತಿಯ -
23 ಣ ದೇವರಿಗೆ [ದೊ]ಡ್ಡಗೇರಿಯ
24 ತೆಂಕಣ ಕೊಪ್ಪಲ [ಮೊ]ದವಾ -
25 [ಗಿ]ಲ ಬಿಟ್ಟ ಮನೆಯೊಂದು ‖
26 [ತೆ]ಂಕಣ ಕೆಯ ಗುಣ್ಡಿಗೆ ಮೆಟ್ಟ -
27 [ರಿಂ] ಬಡಗಲುಂ ಬಿಟ್ಟ ಕೆಯಿ
28 ಮತ್ತರು ನಾಲ್ಕು ‖

## No. 86

(*B.K. No.* 16 *of* 1928-29)

AIHOḶE, HUNGUND TALUK, BIJAPUR DISTRICT

On a pillar in the Jyōtirliṅga temple

**1157 A.D.**

This is dated the Chālukya-Vikrama year 82, Īśvara, ba. 13, occurring before the Avārevasataṟa Amavāse, Tuesday, corresponding to 1157 A.D., December 31. The said amāvāse coincides with that of Pausha.

It registers a gift to the god Chikkēśvara by Nīlaṇa.

TEXT

1 ಸ್ವಸ್ತಿ ಚಾಳುಕ್ಯ ವಿಕ್ರಮವರ್ಷದ ೮೨
2 ಈಶ್ವರ ಸಂವತ್ಸರದ ಅವರೆವಸತಱ
3 ಅಮಾವಾಸೆಯ ಮುಂದಣ ೧೩ ಮಂಗಳ -
4 ವಾರದಂದು ರೇಕರಾಣಿಯ ಭಗವತಿಯ ಕೆಳ್ಳದ[1] ಹುಣ್ಣಿಗೆಯ್ಯ ಸ .
5 ಳಲುಳ್ಳ ನಿಸುವಕಳಯ ಬ[ಳ್ಳರ] ನೀಳಣ
6 ಚಿಕ್ಕೇಶ್ವರದೇವರಿಗೆ ಬಿಟ್ಟ ‖

## No. 87

(*B.K. No.* 64 *of* 1928-29)

SAṄGAM, HUNGUND TALUK, BIJAPUR DISTRICT

On a fragment of a stone built into the wall of the Saṅgamēśvara temple

**1158 A.D.**

This is dated the Chālukya-Vikrama year 83, Bahudhānya Śrāvaṇa śu. 11, Thursday. In the said cyclic year there were two Śrāvaṇas. In the absence of specific mention of Adhika-Śrāvaṇa, the reference may be to Nija-Śrāvaṇa, in which case the details correspond to 1158 A.D., August 7.

The rest of the epigrah is lost.

---

[1] The words ಭಗವತಿಯ ಕೆಳ್ಳದ are added at the end of the inscription, its proper place being indicated by a cross mark in line 4.

TEXT

1 ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮ . . .
2 [೮೩]ನೆಯ ಬಹುಧಾನ್ಯ ಸಂವತ್ಸ . . .
3 ವೆಣ ಶುದ್ಧ ೧೧ ಬೃಹಸ್ಪತಿವಾ[1]

## No. 88

(*B.K.* 62 *of* 1928-29)

SAṄGAM, HUNGUND TALUK, BIJAPUR DISTRICT

On a stone set up inside the Saṅgamēśvara temple

**1160 A.D.**

This is dated the Chālukya-Vikrama year 84, Pra. . , Kārttika śu. 5, Sunday. The cyclic year was obviously Pramādi and the details correspond to 1160 A.D., October 18.

It records a gift of land, flower-garden, shop and oil-mill by Chunchin-Ādiseṭṭi and *Aivattokkalu* to the gods Kāḷēśvara and Āchesvara, who was residing in Malahāri-tīrtha. The gift was made through the favour of the *Mahājanas* of Kūḍala-Kappaḍi-Saṅgama which is described as *Sarvanamasyad-agrahāra* and primeval *Brahmapuri* of the emperors. The *Mahājanas* were devotees of the god Saṅgamēśvara and reputed for their scholarship.

TEXT

1 ◈ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರಿಷದ ೮೪ ನೆಯ [ಪ್ರ] . . . . .
2 ರದ ಕಾರ್ತ್ತಿಕ ಶುದ್ಧ ೫ ಆದಿತ್ಯವಾರದಂದು ಸ್ವಸ್ತಿ ಯಮ . . . . .
3 ಯಧ್ಯಾನಧಾರಣ ಮೌನಾನುಷ್ಠಾನ ಜಪಸ[ಮಾಧಿ] . .
4 ಸಂಪನ್ನರುಂ ಶ್ರೀಸಂಗಮೇಶ್ವರದೇವಲಬ್ಧವರಪ್ರ . . . . . . .
5 ಮೆಚ್ಚಕ್ರವರ್ತ್ತಿಗಳಾದಿಬ್ರಹ್ಮಪುರಿಯಪ್ಪ ಸರ್ವ್ವನಮ . .
6 ಗ್ರಹಾರಂ ಕೂಡಲ ಕಪ್ಪಡಿಸಂಗಮದ ಶ್ರೀಮನ್ಮ . .
7 ಹಾಜನಂಗಳ ಪರಮ ಕಾರುಣ್ಯ ಪ್ರಸಾದದಿಂದಂ ಸಮಸ್ತಗುಣ . . .
8 ಚುಂಚಿನಾದಿಸೆಟ್ಟಿ ಶ್ರೀಕಾಳೇಶ್ವರದೇವರಿಗೆರುವಣಕ್ಕೆ . .
9 ಕೆಯ ಲೊಕ್ಕಿಗೆಱೆಯಿಂ ಬಡಗಣ ಮತ್ತರು ಹನೆ . .
10 ಶ್ರೀಮದಾಚೇಶ್ವರದೇವರಿಗೆ ಹೂವಿನಾರ ದಾರಿಯ . . .
11 ನಸಿಯ ಬಟ್ಟೆಯಿಂ ಬಡಗಣ ಗದ್ದೆಗೆಯ್ಯ ಸ್ಥಳ . .
12 ಯರುವಣಕ್ಕೆ ಬರಸಿ ಬಿಟ್ಟ ಮತ್ತರು ಹ . .
13 ಡು ೧೦ ಅ[ಇವ]ತೊಕ್ಕಲು ಮುಖ್ಯವಾಗಿ ಸಮಸ್ತರ[ಲ್ಲಿ] . .
14 . . . ರೆದು ಆಚೇಶ್ವರಗೆ ಗಾಣದಲು . .
15 ಮತ್ತವಿರ್ಬ್ಬರು ದೇವರಿಗಂ ಸಮುದಿತವಾಗಿ ಮಾಡಿಸಿ ಕೊಟ್ಟು ಬಿಟ್ಟ ಮ[ತ್ತ] . .
16 ಹೂವಿನ ತೋಟ ೧ ಅಂಗಡಿ ೧ ಗಾಣ ೧ ಯಿಂತಿನಿತುಂ ಶ್ರೀಮನ್ಮಹಾ[ಜ] .
17 ನಂಗಳ ಧರ್ಮ್ಮಂ ಚಂದ್ರಾರ್ಕ್ಕತಾರಂಬರಂ ಪ್ರತಿಪಾಳಿಸುವರು ◎ ಅನುಪಮ .
18 ವಿದ್ವಜ್ಜನವಿನುತಸರ್ವ್ವ[ಕ]ಲಶಾಸ್ತ್ರವಿದರೆನಿಪ ಮಹಾಜನಮಂ ಕಾಳೇಸ್ವರ ನಿಂದನುದಿನ .
19 ರಕ್ಷಿಸುವ ಪೆರ್ಮ್ಮೆ ತಾಂ ಜಗವಿದಿತ ◎ ಧರೆಯೊಳ್ ಪೂಜ್ಯರೆನಿಪ್ಪ ಸಂಗ .
20 ಮದ ಭೂದೇವಾಗ್ರಗಣ್ಯರ್ಗ್ಗೆ ವಿಸ್ತರದಿಂ ಭಾಸುರಸಾಂದ್ರಚಂದ್ರರುಚಿ .
21 ಯಂ ತಾಳ್ದಿರ್ದ್ದ ಸತ್ಕೀರ್ತ್ತಿಯಿಂ . . ದೆಯ್ವಂ ಶಿವಶಂಭುರುದ್ರನೆನಿಸಿರ್ದ್ದಾಚೇಸ್ವರಂ ಕೂರ್ತು
22 ತಾಂ ಪರಸೋತ್ಸಾಹದಿನೀಗೆ ಮಂಗಳಮಹಾಶ್ರೀಯಂ ಜಯಶ್ರೀಯುಮ .

[1] The continuation is lost.

23 ಮ ◎ ಮಲಹಾರೀತೀರ್ತ್ಥದೊಳ್ ತಾ ನೆಲಸಿದ್ದಾರ್ಜ್ಜೇಶ್ವರಂ ಮಹೋತ್ಸವದಿಂದಂ [॥*] -
24 [1]ಸೊಲಗೆಣ್ಣೆಯ ಬಿಟ್ಟರು ಚಂದ್ರಾದಿತ್ಯ
25 . . ರುಳ ನಡಸುವರು [॥*]

## No. 89

(*B.K. No.* 168 *of* 1926-27)

KARAḌI, HUNGUND TALUK, BIJAPUR DISTRICT

On a slab set up in front of the *chāvaḍi*

**Circa 12th century**

The epigraph contains the Chālukya *praśasti*, but the name of the king is lost. It introduces a feudatory chief and a subordinate officer and mentions the region of Kariviḍi Thirty. The inscription is badly damaged and the details are lost.

TEXT

1—4 Damaged
5 . . . . . . . . . . . ಸಂದೋಹಸಮಂ ॥
6 . . . . ಶ್ರೀ . . . . . . . . . . ಕುಳತಿಳಕಂ ಚಾಳುಕ್ಯಾಭರ -
7 . . . . . . . . . . . ಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ
8 . . . . . . . . . . . ಮದನಮಹೇಶ್ವರಂ ಸಮರ[ಭೈರ]-
9—15 Damaged
16 ರಾಜ್ಯಮಂ ಗುಣ . . . . . . . . . . ಜೀವಿ ಸಮಧಿಗತಪಂಚಮಹಾಶಬ್ದ ಮ -
17 ಹಾಸಾಮಂತಂ . . . . . . . . . .
18 ರ ದಿವಾಕರಂ . . . . . . . . . . ಕರ್ಣ್ಣ ದೇವರಾಜ್ಯ -
19 ಭರ ಧುರಂಧರಂ . . . . . . . . . . ಶ್ರೀಮನ್ಮಹಾಪ್ರ -
20 ಧಾನಂ ಮನೆವೆರ್ಗ್ಗಡೆ . . . . . . . . . . ಕರಿವಿಡಿ [ನಾ] . . . .
21 ಸಕಾರುಣ್ಯದಿಂ . . . . . . . . . . ಸುಕಸಂಕಥಾವಿನೋದದಿಂ ರಾಜ್ಯಂಗೆ -
22 ಯ್ಯುತ್ತಮಿರೆ . . . . . . . . . . ॥ ವೃತ್ತ ॥ . . . .
23—25 Damaged
26 ಕಂದ ॥ ವರಿ . . . . . . . . . . ಕರಿವಿಡಿ ಮೂ -
27 ವತ್ತ . . . . . . . . . . [ವಿ]ಳಾಸ [2]

## No. 90

(*B.K. No.* 177 *of* 1926-27)

RŌṆ, RON TALUK, DHARWAR DISTRICT

On a stone lying in front of the Kalamēśvara temple

**Circa 12th century**

It commences with the Chālukya *praśasti* ; the name of the king, however, is lost. Barring the mention of Monday and solar eclipse the other details of the date are also lost. It seems to record a gift of money. The inscription is damaged.

TEXT [3]

1 ಪರಮೇಶ್ವರಂ . . . . . ರಕಂ ಸತ್ಯಾ . .
2 [ಕುಳ]ತಿಳಕಂ ಚಾಳುಕ್ಯಾಭರಣಂ ಶ್ರೀಮ . . . . . . .
3 ದೇವರ ವಿಜಯರಾಜ್ಯ . . . . . . . . . .
4 ವರ್ದ್ಧಮಾನಮಾಚನ್ದ್ರಾ . . . . . . . . . .
5—10 Damaged
11 . . . . . . . . . . ಸೋವಾರದಂ[ದು]

[1] The last two lines are added later on.
[2] The rest of the inscription is much damaged and worn out.
[3] The beginning of the record is lost.

12 ಸೂರ್ಯ್ಯ[ಗ್ರಹಣ] . . . . . . . . . . . ಪನ್ನಿರ್ವ್ವರ್ಬ್ರಾಹ್ಮ -

13—16 Damaged

17 . ೨೦ ಗದ್ಯಾಣ . . . . . . . . . . ಮಂ ರ .

18 ಕ್ಷಿಸಿದವರ್ಗ್ಗೆ . . . . . . . . . .

19 ಕೋಡುಂ ಕೊಳಗುವೆಂ . . . . . . . . . . .

20 ಸಾಸಿರ್ವ್ವರ್ವ್ವೇದವಾ . . . . . . . . . . .

21 ದೊಳಿಸ್ಯೆ . . . . . . . . . . . . ದ ಮಹಾಪಾತ.

22-27 Damaged. Contain imprecatory verses.

## No. 91

(*B.K.* 195 *of* 1926 - 27)

JAKKALI, RON TALUK, DHARWAR DISTRICT

On a stone leaning against the left wall of Saṅgamēśvara temple

**Circa 12th century.**

This is dated the Chālukya-Vikrama year, the only available details of which are Kārttika śu. 1, Sunday.

The record refers itself to the reign of a Chālukya king whose name is lost. It seems to register some gift to a god. It is badly worn out and the other details are missing.

TEXT

1 ☸ ನಮಸ್ತುಂಗ . . . . . . . . . . . . ಮರ ಚಾರವೇ

2 ತ್ರೈಲೋಕ್ಯ . . . . . . . . . . . . ಸಂಭವೇ

3 ಸ್ವಸ್ತಿ ಸಮಸ್ತಭುವ . . . . . . . . . . ಜಾಧಿರಾಜ ಪರಮೇ -

4 ಶ್ವರಂ ಪರಮಭಟಾರ್ಕ್ಕ . . . . . . . . . . ಳುಕ್ಯಾ[ಭ]ರಣಂ

5 ಶ್ರೀಮ . . . . . . . . . . ಮುತ್ತರೋತ್ತರಾಭಿ .

6 ವೃದ್ಧಿ ಪ್ರವರ್ದ್ಧಮಾ . . . . . . . . . .

7—18 Worn out

19 ಮಸ್ತ ಪ್ರ . . . . . . . . . .

20—22 Worn out

23 ಚಾಳುಕ್ಯ ವಿ . . . . . . . . . . ಕಾರ್ತ್ತಿಕ ಸು -

24 ದ್ಧ ೧ ಆದ . . . . . . . . . . .

25—30 Worn out

31 ದೇವರಿಗೆ . . . . . . . . . . . .

32—35 Worn out

36 ಬ್ರಾಹ್ಮಣರ್ಗ್ಗೆ . . . . . . . . . . . . ವಾರಣಾಸಿ .

37 Worn out

38 ಅರ್ಗ್ಘ್ಯ . . . . . . . . . . . . ಕೊಂದ ಪಾಪವಕ್ಕು ||

39 ಸ್ವದತ್ತಾಂ . . . . . . . . . . . . ರ್ವ್ವರ್ಷ ಸಹಸ್ರಾಣಿ ವಿಷ್ಟಾ -

40 ಯಾಂ ಜಾ . . . . . . . . . . . . ಶ್ರೀ ಶ್ರೀ ◎ ◎

## No. 92

(*B.K. No* 238 *of* 1926-27)

SŪḌI, RON TALUK, DHARWAR DISTRICT

On a broken stone near the Viṭhōba temple

**Circa 12th century.**

This inscription commences with the Chālukya *praśasti* and refers to the reign of a Chālukya king whose name is lost. Of the date portion, only Pushya ba. 13, Thursday; is preserved. It describes the family of Sinda feudatories and mentions Simha and his queen Kētaladēvī.

It registers a gift of land and seems to refer in this connection to the preceptor Sōmēśvara who was its recipient. The epigraph is damaged and some portions are lost.

TEXT[1]

1 ಓಂ ನಮಶ್ಶಿವಾಯ ‖ ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ ‖ ತ್ರೈಲೋಕ್ಯ ನ

2 ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತ ದಂಷ್ಟ್ರಾಗ್ರ .

3 ಶ್ರೀಮಚ್ಚಾಳುಕ್ಯಚಕ್ರೇಶ್ವರರ ಮಹಿಮೆಯಂ ಬಣ್ಣಿಸಲ್ಬಲ್ಲರೇ ವಾಕ್ಪ್ರವೀಣ್ಯಮ್ಮರ್ಗ್ಗಂ . . .

4 ದಂತಪ್ರತಿಮ ನಿಜಭುಜೈಕದಂಡನುಗ್ರಾಜಿಕೇಳಿರಾಯಂ ವಿಕ್ರಾನ್ತದಿಂ ರಾತ್ರಿಯೆನೆ . . . . .

5 ಭುವನಮಂ ತನ್ನ ತೇಜದಿಂದಂ ಪುದಿದತ್ಯಭಿನುತಿವೆತ್ತಂ ಭೂವಲ್ಲಭಮಸ್ತಕರತ್ನನೆನಿಪ . . . .

6 ಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕು . . . . . .

7 ರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ ‖ ತ . . .

8 ತ ಪ್ರೋತ್ಪಾಟನಪಟುವೆನಿಪ್ಪನಾಚುಗಿಭೂಪ । ಜಗವೆಲ್ಲಂ ಕಡುಬಿಂಗೆ ಕಂಟಳಿಪನಂ [ವೆ] . . .

9 ಳ್ ಹಂಪನ ಹೆಂಪನೆಯ್ದೆ ಪರಪುತ್ತುಂ ಬೀರದರ್ಪ್ಪದಲಾಚುಗಿ ಭೂಪಂ ಭುಜದಂಡದೋ . . . .

10 ಮರಚರಧುರಂಧರರುರ್ವ್ವೀಜನತಾ ಜಿವ್ಹಾಪನರ್ತ್ತನನರ್ತ್ತಕರು[ದ್ಧ]ತಾರಿಕರಿಕರಿ ಕೇಸರಿಗ[ೞ] . .

11 ದುರ್ದ್ಧರಧೈರ್ಯ[ರ್ಪ್ಪ]ಟ್ಟದಾರ್ತ್ಥರ್ಮಂತಂತಸದರು ‖ ಅವರೊಳ್ ವೀರರಸೈಕಾರ್ಣ್ಣವನಿನ್ನ . . .

12 ಸಿಂಗರಸ ‖ ಆ ವಿಭು ಸಿಂಹನ ಕೇತಲದೇವಿಯ್ಯುಂ ನೆಗಳ್ದ ವಾಗ್ವಧೂದೇವಿಯ್ಯುಂ ಭೂ . . . .

13 ವಿನವನವದ್ಯ ಸಿಂಗದೇವ ಮಣ್ಡಳಿಕಂಗಂ ಜನಯಿಸಿದನುರ್ವ್ವಿಗಂ ಸಲೆ ದಿನಪ . . . . . .

14 ಕಲ್ಪರ ತನ್ನ ಪೆಸರೆ ಪೆಸರಾಗೆಸದಂ ನಡನಡ ನಡುಗಲ್ ತಗೆವಕ್ಕರ್ಡಿಗಿಡಿ . . . . . . . . .

15 ಳ್ ಬಲ್ಲವಾ[ದು]ದಾಜಿವ್ಯಸನಂ ಸಿಡಿಲ್ಗೆ ಕಡಿಕೆಯ್ಗಂ ಕಾಯ್ಪು ನೀಳ್ಪಳ್ಪ . . . . .

16 ಯೊಳತ್ಯಾಶ್ಚರ್ಯ್ಯಮಪ್ಪನ್ನೆಗ ‖ ಮಾಳವ ಚೋ . . . . . . . . . . . .

17 ಜಾಹುತಿ ಹೂಣ ಭೋಟ್ಟಭೂಪಾಳಕಮಣ್ಡಳೇಶ್ವರರ ನೆತ್ತಿಯೊ . . . . . . . . . . .

18 ಯೇಳಿಲಂ ಕೋಬೇಳಿಲಂ ಮನವಿದಂ ನಿಜನಿಶಿತಖಳ್ಗಧಾರಾಜಳದೊ[ಳ್] . . . . . . . . . .

19 ತ್ತಂ ಸಮ್ಮರಸಿಯರಲಗ್ಗರ್ಣ್ಣ ಬೆಳಗನೀಕ್ಷಿಸೆಬಣ್ಣಿಪ್ಪರಿದುಂ ಧುರ[ದಿ] . . . . . . . . . .

20 ಯೊಳ್ ಸಮನಾರೊ ಮಿಕ್ಕ ಭೂಭುಜರದಟಿಂಗೆ ಸಿಂಗಮಿಸ . . . . . . . . . .

21 ತಬ್ರಜಕ[ಲ್ಲಿ] ವಜ್ರಸಂಜರಮೆನಲ್ ಸದ್ರಿಕಂ ಭುವನಾನ್ತರಾ . . . . . . . . . . .

22 ರಂ ಸಮುದಮಂಡಳಕಮದಗಜಮೃಗೇಂದ್ರಂ ವಿಭುದೇವೇಂದ್ರಂ . . . . . . . . . .

23 ಸೂಪಕಾರಂ ಅಣ್ಣನಂಕಕಾಜಂ ದುರ್ಗ್ಗತ್ರಯತ್ರಿ . . . . . . . . . . .

24 ಕಂ ರಿಪುನೃಪತಿಸಾಧಕಂ ತೊಡರೆ ಬಲ್ಲಂಧಂ ನುಡಿದನ್ತೆ ನ . . . . . . . . . .

25 ಮನುಭಯಸಾಮ್ಯದಿಂ ದುಷ್ಟಜನಶಿಷ್ಟ ಪ್ರ . . . . . . . . . . .

26 ಯುಕ್ತಮಿಂದ್ರ ‖ ಜಳನಿಧಿಪರಿವೃತ ವಸುಧಾ . . . . . . . . . . .

27 . . ‖ ಎನಿಸಿದ ಪಟ್ಟಣದೊಳ್ ನೆಟ್ಟ[ನೆ] . . . . . . . . . . . .

28 ಎನಿಪವರ ಶಿಷ್ಯರುರ್ವ್ವೀಜನವಂದ್ಯ[ರ್ಪ್ಪ] . . . . . . . . . . .

29 ಆ ಮುನಿನಾಥನ ಶಿಷ್ಯ ಸೋಮೇಶ್ವರ . . . . . . . . . . . .

30 ಎಲೆ ಚಾತುರ್ವ್ವರ್ಣ್ಣಕಪರಾಕ ಮೋಳಕಪದ . . . . . . . . . . .

31 ವೆ ನಿರ್ವ್ವಾಧ್ಯಯನಿಪ್ಪ ಬೌದ್ಧ ಬಿಡು ಸೀಂ ನಾಟು . . . . . . . . . . . .

[1] The right portion of the stone is broken and missing.

32 ಣಮೌನಾನುಷ್ಠಾನ ಜಪಸಮಾಧಿ . . . . . . . . . .
33 ಲಾಟ . . . . || ಸರಸಕವಿಕಾವ್ಯ . . . . . . . . .
34 ದತ್ರ್ಯಯ ತ್ರಿಪಥಗಾಹಿ ಮಾ . . . . . . . . . .
35 ರುಮೆನಿಸಿದ ಮನ್ನೆಯ ಮೞ[ಯ] . . . . . . . . . .
36 ಪ್ರಷ್ಟ್ಯ ಬಹುಳ ೧೩ ಬೃಹ . . . . . . . . . .
37 ಕ್ಕಂ ಖಣ್ಡಸ್ಫುಟಿತ ಜೀರ್ಣ್ಣೋದ್ಧಾರ . . . . . . . . . .
38 ನ್ನಸಿನ್ಹೊಲದೆಲು . . . . . . . . . .
39 ಕಲ್ಲನಿಕ್ಕಿ ಬಿಟ್ಟ ಮತ್ತರ್ . . . . . . . . . .
40 ಹಂಪಯಗೆಱೆಯ . . . . . . . . . .
41 ಲಿಪ್ಪತ್ತೆಂಟು । ಬಿ[ದಿ] . . . . . . . . .
42 ತ್ತಿಲಿಪ್ಪತ್ತೆ . . . . . . . . . .
43 ಗೊನು [1] . . . . . . . . . .

## No. 93

(*B. K. No.* 217 *of* 1928–29)

BENNŪR, NAVALGUND TALUK, DHARWAR DISTRICT

On a slab set up in front of the Hanumān temple

**Circa 12th Century**

This commences with the *praśasti* of a Chālukya king whose name is lost, and seems to register a gift. In the later part are mentioned Maṇi Nāgōja and a gift to a carpenter. The epigraph is much damaged.

TEXT

1 ಸ್ವಸ್ತಿ . . . . . ಪೃಥುವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರ[ಮ]ಭಟ್ಟಾರಕ .
2 to 7 Damaged
8 . ವಾರಣಾಸಿಯ . . . . . ಸಾಸಿರ ಕವಿಲೆಯುಮನೞಿದ ಮಹಾ[ಪಾ]ತಕ . . . . .
9 . . . . . ಬಹುಭಿರ್ವ್ವಸುಧಾ ಭುಕ್ತಾ ರಾಜಭಿಸ್ಸ[ಗ]ರಾಜಭಿಃ ಯಸ್ಯ ಯಸ್ಯ ಯದಾ ಭೂಮಿ
10 ತಸ್ಯ ತಸ್ಯ ತದಾ ಫಲಮ್ . . . . . . . . . .
11 ನಾಗರ ಭೂಮಣ್ಣ . . . . . . . . . . . ಸಾಸನಮ
12 . . . . . . . . . . . ಸಾಸಾನದ ◎ ಅಮ್ಮನ . .
13 . . . . . . . . . . . ಮಾಡಿಸಿ ಅಮ್ಮ . . . . . . .
14 ನಿಲಿಸಿದಿ ಸಾಸಾನ ಮಾ . . . . . . . .
15 and 16 Damaged
17 . . . . . . . . . . . ಕಂ[ಹಟ] ಭಳಾರಿಗೆ . . . . . . ಸ್ವಸ್ತಿ ಶ್ರೀ ಮಣಿ ನಾಗೋಜರ ಮಗಂ
18 . ರ ಸಿದ್ಧರ ಮಗ . . . . . . . ಬಡಿಗಗೆ ಬಿಟ್ಟ ಕೆಯ್ಯ
19 . . . . . . . ಮಾಡಿಸಿದ . . . . . . . .

## No. 94

(*B. K. No.* 224 *of* 1928–29)

HĀLKUSUGAL, NAVALGUND TALUK, DHARWAR DISTRICT

On a slab set up in the Siddhēśvara temple

**Circa 12th Century.**

This record seems to belong to a Chālukya king whose *praśasti* is cited in the earlier lines. The rest of the epigraph is damaged and worn out except for the concluding portion bearing the imprecation.

1 The stone breaks off here.

TEXT

1 to 3 Damaged

4 ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ[ಪೃಥ್ವೀವಲ್ಲಭ] ಮಹಾರಾಜಾಧಿರಾಜ [ಪರ]ಮೇಶ್ವರಂ ಪರ -
5 ಮಭಟ್ಟಾರಕ . . . . . . . . . .
6 to 23 Damaged
24 . . . . . . . . . . . . ಪ್ರಯಾಗೆಯ -
25 ಗ್ಳ್ಯರ್ತೀರ್ತ್ಥ[ಂಗಳೊಳ್] ಚತುರ್ವ್ವೇದಪಾರಗ ಬ್ರಾಹ್ಮಣರ್ಗ್ಗೆ
26 ಸಾಸಿರ ಕವಿಲೆಯ ಕೋಡುಂ ಕೊಳಗುಮಂ ಪಂಚರತ್ನದೊಳ್ಕಟ್ಟಿಸಿ
27 ದಾನಂ ಗೆಯ್ದ ಫಲಮೆಕ್ಕುಂ ॥ ಇ ಧರ್ಮ್ಮಮನಳಿದನಾವಂ ಸಾಸಿ -
28 ರ ಬ್ರಾಹ್ಮಣರುಮಂ ಸಾಸಿರ ಕವಿಲೆಯುಮಂ ಎಕ್ಕೋಟಿ ತಪೋಧನ -
29 ರುಮಂ . . . . . . . . . .
30 . . . . . . ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ ಷ-
31 [ಷ್ಟಿ]ರ್ವ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥ ಸಾಮಾನ್ಯೋ -
32 ಯಂ ಧರ್ಮ್ಮಸೇತುರ್ನ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವ -
33 [ದ್ಭಿಃ] ಸರ್ವ್ವಾನೇತಾನ್ಭಾವಿನಃ ಪಾರ್ತ್ಥಿವೇಂದ್ರಾನ್ ಭೂಯೋ ಭೂಯೋ ಯಾ -
34 ಚತೇ ರಾಮಚಂದ್ರಃ ॥ ಬಮ್ಮ[ದೇ] . . . ನಾಯಕನ ಬರಿತ ॥ ◎ ॥

## No. 95

(*B. K. No.* 234 *of* 1928–29)

KURHAṬṬI, NAVALGUND TALUK, DHARWAR DISTRICT

On a slab leaning against a wall of the Śankaraliṅga temple

**Circa 12th Century.**

This inscription refers itself to the reign of a Chālukya king whose name **is lost.** **It** seems to register several gifts including an oil mill for a perpetual lamp to the **god** **Śaṅkara** by the *Mahājanas* of the *agrahāra* and others. The epigraph is damaged.

TEXT

1 ◈ ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರ . . . . . . . ನಗರಾರಂಭ ಮೂಳ -
2 ಸ್ತಂಭಾಯ . . . . . . . . . . . ಮಹಾ -
3 ರಾಜಾಧಿರಾಜ . . . . . . . . . . . ತಿಳಕಂ -
4 ಚಾಳುಕ್ಯಾಭರಣಂ . . . . . . . . . . . ಜ್ಯಮುತ್ತ -
5 ರೋತ್ತರಾಭಿ . . . . . . . . . .
6-8 Damaged—
9 . . . . . . . . . . . . [ಬ]ಡದಗ್ರ -
10 ಹಾರಮ . . . . . . . . . . . ಭವ್ಯಮಖಿಳ ಜ -
11 ನಸಂಸೇವ್ಯ . . . . . . . . . . . ಗಳಂ ಪೆರ್ಚ್ಚಿ -
12 ದ ನಾನಾರಾಮ . . . . . . . . . . . ಧಾತ್ರಿ -
13 ಯೊಳೆನಸಮ . . . . . . . . . . .
14 Damaged.
15 . . . . . . . . . . . . ಸ್ವಸ್ತಿ ಯಮ -
16 ನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನು . . . ಜಪಸಮಾ -
17 ಧಿ ಶೀಲಸಂಪನ್ನರಪ್ಪ ಶ್ರೀಮದಗ್ರಹಾರಂ . . . . . . ಯುಂರೊಡೆಯ -
18 ಪ್ರಮುಖ ಮಹಾ . . . . . . ಶ್ರೀ ಶಂಕರದೇವರ . . . . . . .
19 . . ಕೊಟ್ಟರು . . . ಮಾಣಿಯ . . . . . . . . . .
20 ಕರದೇವರ ನಂದಾದೀವಿಗೆಗೆ . . ಗಾಣಂ . . . . . . . . . .
21 ಪ್ರತಿ ಸೊಲಗೆ ಕೊಟ್ಟ . . . ಯಲ್ಲಿ ಸೊಟಿಗೆಯೆಣ್ಣೆಯಂ ಕೊಟ್ಟರು ॥ . . . . .
22 ಗಗ್ರನೊಬ್ಬರುಂ . . . . . ದೇವರ ಧರ್ಮಕ್ಕೆ ಶಂಕರದೇವರಾ . . . .
23 . . . . . . . . . . . . ಧಾರಾಪೂರ್ಬ್ಬಕಂ ಮಾಡಿ ಗೊಂಗಣಿ ಬಿಡ . . . . .

24 . . . . . ತ್ತಮಂ ಬಿಟ್ಟರಿನ್ನೀ ಧರ್ಮ್ಮಮಂ ನಾಲ್ವತ್ತೆಂಬರ್ರ್ . . . .
25 . . . . ॥ ಸಂಕರದೇವ . . . . . . . . . . .
26 . . . . . ತಹ ಸರ್ಬ್ಬನ[ಮಃ]ಸ್ಯ॥ ಸಂಕರದೇವ . . . . . . . . . .
27—29 Damaged

## THE KALACHURIS

### No. 96

(*B. K. No.* 201 *of* 1928-29)

ANNIGĒRI, NAVALGUND TALUK, DHARWAR DISTRICT

On a slab set up in the Hanumantadēva temple

**Bijjaḷa, 1157 A.D.**

This record is dated the 2nd regnal year of the king, Īśvara, Pushya ba. 8, Wednesday, Uttarāyaṇa-saṅkramaṇa, corresponding to 1157 A.D., December 25, Wednesday f·d.t.·11.

It records a gift of land to the god Dhōrēśvara of Aṇṇigeṟe, known as Dakshiṇa-Vārāṇāsi, for worship and repairs, by *Daṇḍanāyaka* Śrīdharayya, the *Perggaḍe* of Beḷvala-nāḍu, in conjunction with his ministerial officials. The epigraph gives a brief account of the donor's family and describes Aṇṇigeṟe as the *rājadhāni-paṭṭaṇa* (chief town) of Beḷvala.

TEXT

1 . . . . . . . ಜಾಧಿನಾಥ ಬನ್ಧುರ . . . . . . . . . . .
ಗಿರಿಸುತಾಘನಕುಚೋದ್ಧೃಕುಂಕುಮಸ್ಫುರದ . . . ॥
2 . . . . . . . ॥ ವೃತ್ತ ॥ ಆದಿ . . . . . . . . . . .
ರಾಪ್ಪುಟಮಂ ಭುಜಾಸಿಯೆಂಬುಧಿ . ನಖಾಗ್ರದಿಂ ತಿಱಿದು . . .
3 ರಾತಿಯ ವಿಪ್ರುಳಾಜಿರಂಗದೊಳ್ಕದಟ ವಿಳಾಸ[ಮ] . . . . ದೆಲೆ ಕದನ ಪ್ರಚಂಡನಂ ಕದನ
ದೊಳಾಂಪರಾತಿನೃಪರಾ -
4 ಗ್ಗರ್ಳೆರ ಬಿಜ್ಜಳ ಭೂಮಿಪಾಳನಂ ॥ ಪರಭೂಪಾಳರ . . . . ಜಯಲಕ್ಷ್ಮೀಕಾನ್ತಯಂ
ತಂನ ತೋಳ್ವ[ರಗಿಂ] . . ಳ್ಕೆಳ್ಗೊಂಡು . . .
5 . . . ಸಾದರಂ ತಾನಿದೆಚ್ಚರಿ ವಿದ್ವಿ[ಡ್ನೃಪ]ರ ಕುಂಭಿಕುಂಭ . . . . . . . .
. ॥ ಭೀಕರಭುಜಂ ಬಿ -
6 [ಜ್ಜ]ಳವಾಪಾಳಕಂ ॥ ◎ ಸ್ವಸ್ತಿ ಸಮಧಿಗತ ಪಂಚ[ಮಹಾಶಬ್ದ ಮ]ಹಾಮಂಡಳೇಶ್ವರಂ ಕಾಳಾಂಜರ
ಪುರವರಾಧೀಶ್ವರಂ ಸುವರ್ಣ್ನ -
7 ವೃಷಭಧ್ವಜಂ ಡಮರುಗತೂರ್ಯ್ಯನಿರ್ಗ್ಘೋಷ[ಣಂ ಕಳಚು]ರಿಯ ಕುಳಕಮಳ ಮಾರ್ತ್ತಣ್ಡಂ
ಕದನಪ್ರಚಂಡಂ ಮಾನಕನಕಾ -
8 ಚಳಂ ಸುಭಟರಾದಿತ್ಯಂ ಕಲಿಗಳಂಕುಸಂ ಗಜ[ಸಾಮನ್ತಂ] ಶರಣಾಗತ ವಜ್ರಪಂಜರಂ ಪ್ರತಾಪಲಂಕೇ
ಶ್ವರಂ ವೈರೀಭಕಂಠೀರವಂ ಪರನಾರೀ -
9 ಸಹೋದರಂ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲಂ ಚಲದಂಕರಾ[ಮಂ] ನಾಮಾ[ದಿ] ಸಮಸ್ತಪ್ರಸಸ್ತಿ
ಸಹಿತಂ ಶ್ರೀಮದ್ಭುಜ ಬಳಚ -
10 [ಕ್ರ]ವರ್ತ್ತಿ ತ್ರಿಭುವನಮಲ್ಲ ಬಿಜ್ಜಳದೇವ ವಿಜಯರಾಜ್ಯ [ಮುತ್ತರೋ]ತ್ತರಾಭಿವೃದ್ಧಿಪ್ರವರ್ದ್ಧ
ಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿ -
11 ರೆ ತತ್ಪಾದ ಪದ್ಮೋಪಜೀವಿ ॥ ವೃತ್ತ ॥ ಅನವದ್ಯಾಕೃತಿ . . . . . . . . . .
. ಸಂದೋಹನಂ ದಾನಮೂರ್ತ್ತಿ ನಿಕಾಯೋಪ್ಸಿತ ಕಾರ್ಯ್ಯಸಿದ್ಧಿ [ನು] -
12 ಡಿ ಸಾಫಲ್ಯೋಕ್ತಿ ಸನ್ಮಂತ್ರ ಶಕ್ತಿ ನಿತಾನ್ತ ಜನಾ . . . . . [ಮನು]ಚಾರಿತ್ರ ಮಾತ್ರೀಯ
ವ ಣ್ಣ . . ಮಾ[ಡಿ]ತ್ತನೆ ತಪ್ಪು ಭಾವದೆಸದಂ -

13 ದಂಡಾಧಿಪ ಶ್ರೀಧರಂ ‖ ವಚನ ‖ ಆ ಮಹಾನುಭಾವನ ವಂಶಾವತಾರಮೆನ್ತೆನೆ ‖ ವೃತ್ತ ‖ ನುತಕೌಂಡಿಲ್ಯ
ಗೋತ್ರಜಳಧಿಬ್ಯಾಭಾಸಿಪೂ -

14 ರ್ಣ್ನೇಂದುವಿ[ಸ್ಫು]ರಿತಪುಣ್ಯಾ ಜಯಂಭಟ್ಟನಾ ವಿಭುವಧೂರತ್ನಂ . . . ತ್ರಿಭುವನ ಜಯಾಂ
ಬಿಕೆ ತನ್ತನೂಜನತುಳಂ ಸತ್ಕೀರ್ತ್ತಿಗಂಗಾನಿಮ -

15 ಜ್ಜಿತ ದಿಕ್ಕುಂಜರನಪ್ರತರ್ಕ್ಯಮಹಿಮಂ ದಂಡಾಧಿಪಂ ಶ್ರೀಧರಂ ಆ ವಿಭುಗಗ್ರಜನಖಿಳೋರ್ಬ್ಬೀವಿನುತ
ದಂಡನಾಥ ರಾಣಾಂಗಿ

16 ದಿಟದಿಂ ಭಾ[ವಿಕಂ] . . [ತ]ನುಜಾತಂ ದೇವ . . ವಿಶದ ಕೀರ್ತ್ತಿ [ಲಕ್ಷ್ಮಣದೇ]ವ
ಅವರೊಡ ಹುಟ್ಟಿದಳ[ವ]ನೀ ಭುವನಸ್ತುತ ಸಿರಿಯದೇವಿ ತತ್ -

17 ಪ್ರಿಯಕಾನ್ತಂ . . . . . ವಿಶದಯಶಂ ಕವಿನುತನಾನಂದಭಟ್ಟದಂಡಾಧೀಶಂ ‖ ಆನಂದಭಟ್ಟ
ತನಯಂ ಭೂನುತ ವಾ[ರ್ಷ್ಣೇ]ಯಗೋತ್ರ ನೀರ -

18 ಜಮಿತ್ರಂ ತಾನೆ ಕಲಿ ತಾನೆ ಶುಚಿ ಸಲೆ ತಾನೆ ಮಹ . . . . ವೇಸುಗಿದೇವಂ ‖ ವಚನ
ಆ ವೀರಾಗ್ರಗಣ್ಯ ಜನನೀ ಸಹೋದ -

19 ರಂ ‖ ವೃತ್ತ ‖ ಸ್ಥಿರಸತ್ಯವ್ರತದಿಂ ಯುಧಿಷ್ಠಿರನನಾರ್ಬ್ಬಂ ಕರ್ಣ್ನ . . . . . ರೂಪವಿಳಾಸದಿ
ಮುರಹರ ಪ್ರೋದ್ಯೋತ -

20 . . . . . . . . . . ಪಂ ಮೃಗಾಂಕ ಪರ . . . . . . . ನಿರ್ಬ್ಬರ
ಪುಣ್ಯೋದಯನಪ್ರತರ್ಕ್ಯಮಹಿಮಂ ದಣ್ಡಾಧಿಪಂ ಶ್ರೀ -

21 ಧರಂ ‖ ಕಂದ ‖ . . . ಯೆನಿಪ್ಪ ಭಾಗಲದೇವಿಯುಮಾ . . ಮಹ್ಲಣದೇವಿಯುಮುರ್ವ್ವೀ
ವಿನುತನತುಳ ಸಿದ್ದುಗಿದೇವಂಗೆ

22 ವಿಳಾಸವತಿ . . . [ತಿ]ಯರ್ ‖ ವೃತ್ತ ‖ ಶ್ರೀ[ವಧುವೆ]ನ್ತು ವಿಷ್ಣುಗೆ ಗಜಾ[ವಧು]ವೆನ್ತು
ಮಹೇಶ್ವರಂಗೆ ವಾಣೀವಧುವೆ -

23 ನ್ತು ನೀರಜ[ಭವಂಗೆ] ಮನಃಪ್ರಿಯೆಯನ್ನಿರನ್ತರಂ ಭಾವಿ[ಸುವ]ನ್ತೆ ಸಿದ್ದುಗಿಚಮೂಪತಿಗುದ್ಯ
ಮಹತ್ವೆ ಮಹ್ಲಣದೇವಿ ಮ -

24 ನಃ ಪ್ರಿಯೆ ಪ್ರಮದೆ ತಾನೆನೆ ಕಣ್ಗೆಸದಳ್ಧರಿತ್ರಿಯೊಳು ‖ ಮತ್ತಂ ‖ ಪರಭೂಪಾಳಾಗ್ರದಂಡಾಧಿಪಮದ
ಶಿಖಿಯಂ ನಂದಿಸುತ್ತುಂ

25 ನಿಜಾಧೀಶ್ವರರಾಜ್ಯ ಶ್ರೀಲತಾ . . ಮನೊಪವಿಸುತ್ತುಂ . . ಜನಸ್ತೋತ್ರ ಚಿತ್ತ್ರದಿನ್ದಂ
ವರ್ದ್ಧಿಸುತ್ತುಂ ಪರಿವ್ರಿದಳಿಯೊಳನ್ತೆ -

26 ತ್ತಲುಂ ಸನ್ತತಂ ಶ್ರೀಧರ ದಂಡಾಧೀಶದೋರ್ಮ್ಮಂಡಳಕ . . ಕರಾಳಾ . . ನಾಂತಾಜಳಾಳಿ.
ವಚನ ‖ ಅದಲ್ಲದೆಯುಂ ‖ ವೃತ್ತ ‖ ವ -

27 ನಧಿಪರೀತಭೂತಳಸಮುದ್ಭವ ಲಕ್ಷ್ಮಿಗೆ . . . . . . . ಮುಕರಂ ನಿರನ್ತರಂ . .
ನವೊಪ್ಪಮನಾಳ್ವ ಧಾರಿಣಿ

28 ಜನನುತಮಾದ ಬೆಳ್ವಲಕ್ಕೆ ಸಂದ ನೆಗರ್ತ್ತೆ . . . ನೆಟ್ಟ ರಮಣೀಯಮೆಣ್ಣೆಗೆರೆ ಸರ್ವ್ವಜನೋದ್ಯ
ಸುಖಪ್ರದಾ -

29 ಯಕಂ ‖ ವಚನ ‖ ಆ ಪಟ್ಟಣದೊಳ್ ‖ ವೃತ್ತ ‖ ಗಾವುಣ್ಡವರ್ಗ್ಗಂ ವಿಧೃತಬಹುಕಳಾನೀಕ
ಭೂದೇವವರ್ಗ್ಗಂ ಪುರವರ್ಗ್ಗಂ ಮತ್ತ -

30 ಮುರ್ವ್ವೀಸ್ತುತನಗರಮುಮುದ್ಯದ್ಗುಣರ್ತ್ತಂತುವಾಯ . . . . ಶೌರ್ಯ್ಯಧೈರ್ಯ್ಯಪ್ರಕರ
ಮ[ಹಿ]ತರೆನ[ರ್ಶ್ಲೇ]ಜಪುಣ್ಯ -

31 ಪ್ರಭಾಪ್ರೋದ್ಧುರತೇಜಃಪುಂಜ . . . . . . . . . . ಮಾಗಾತ್ರಿವರ್ಗ್ಗಂ
‖ ವಚನ ‖ ಆ ತ್ರಿವರ್ಗ್ಗಕ್ಕೆ ಜಂಗ -

32 ಮವಜ್ರಪ್ರಾಕಾರಮೆನಿಸಿ ‖ ಕಂದ ‖ ಮಾಧವ . . . . . . . ಕೋಣ್ಡಂ ತನ್ತುವಾಯಾ
ನ್ವಯಮೆಂಬುದ

33 . . ಧರಾಧರ ಶಿಖರದೊಳುದಯಿಸಿದಂ ಬಿಜ್ಜ . . . . . ನುದಯಾದಿತ್ಯಂ ‖ ವಚನ ‖ ಆ ಮನುಜ
ಪುಣ್ಡರೀಕನ

34 ಭುಜಾದಣ್ಡಕೆ ಮಣ್ಡಳಾಗ್ರ . . . . . . . . . . ಮಾ ನೆಗಳ್ದ ಕಂನುಲ
ಬೊಪ್ಪುಲ ಕಾಳಸೇನರೆಂಬ -

35 ರೀ ಬಿರುದರ್ಕ್ಕಳೊಳ್ಪ್ರಖ್ಯಾತ ವೀರಭಟ[ರ್ಕ್ಕಳ್] . . . . . . . . . . ದೊರೆ ಪಾಟಿ
ಕಾಮಿನೀ [ಪ್ರ]ರ

36 ರೆ ಪಟ್ಟಸಾಲಿಗರ್ಪ್ಪರಬಳಭೀಮರರಿಜನಕ . . . . . . . . ಸ್ತುತರಂ ‖ ವಚನ ‖ ಅನ್ತು
ಪರಮ ನಿರತಿಶಯಮ -

37 ನಿಸಿ ‖ ಕನ್ದ ‖ ಚಿತ್ರಿಸಿದಣ್ಣಿಗೆಯೊಳತಿ . . . . . ತಾ[ನೆ] ಮೊದಲೆನೆ ಪೆಸರ್ವೆತ್ತಿತ್ತು
ಗಿರಿಜೇಶಭವನ್ನೆ -

38 ಕ್ಷೇತ್ರಮಂ ಧೋರೇಶ್ವರಂ ಪುರಂ ಬುಧನಿಳಯಂ ‖ . . . . . . . . . . ಕೇಶ
[ವೇಶ್ವ]ರಂ ವಿಶ್ವಧರಾಸ್ತುತ . . ಶೇಶ್ವ -

39 ರಂ ಸಂಗತಿಯಿಂ ರಾಣೇಶ್ವರಂ ಸಮನ್ವಿತಂ ಸಂತತಂ ‖ . . . . . . ಪರಮಶೋಭಾಕರಮಾದ
ಪುರವರದೊಳ್ ‖ ವೃತ್ತ ‖ ನಿ -

40 ರವದ್ಯವರ್ಗ್ಗಕುದೇವಪುತ್ರ[ರ್] ನಿಕಾಯಮಂ . . . . . . ಬಿಂಟರೆನೆಂಟಸರ್ಗ್ಗಲೆ ಪಟ್ಟಸಾ[ಲಿ]
ಗರು . . . ತ್ತಮ ಶ್ರೀ -

41 ಧರಸ್ಥಿತ ಧೋರೇಶ್ವರ ಪಾದಪಂಕೇರುಹ ಭೃಂಗರ್ವೀರವೈರಿಬ್ರಜೋ[ದ್ಧ]ರ ಮತ್ತದ್ವಿಪಸಿಂಹರಾ .
ಮೆಸೆದಸರ್ವಸಿರ್ವರು-

42 ರ್ವ್ವೀರಸುತರ್ ‖ ವಚನ ‖ ಅನ್ತು . . ಯಪತ್ತನ . . . ದೇಶಾಧಿನಾಥ ಶ್ರೀಧರಚಮೂ
ನಾಥ ವಿಪುಳಾಧಿಕಾರಲಕ್ಷ್ಮೀ -

43 ನಿತಂಬಿನಿಗನರ್ಗ್ಘ್ಯಮಣಿಭೂಷಣಂಗಳೆನಿಸಿ ‖ ವೃತ್ತ ‖ ಸ್ಥಿರಚಿತ್ತಂ [ಭೀಮರಾಜಂ] ಪತಿಹಿತನಿರತಂ
ಬೊಪ್ಪದೇವಂ ಧರಿತ್ರೀಧರ -

44 ಧೈರ್ಯ್ಯಂ ಸೋಮನಾಥಂ ನಿರುಪಮಮಹಿಮಂ ಧರೆಯೊಂ ಸದ್ಗುಣಾಳಂಕರಣಂಗಳ್ಪೆಳ್ವಲ ಶ್ರೀಗುಪ
ಕರಣಚಯಂ

45 ತಾಮೆನಲ್ಪೆಂಪುವೆತ್ತ ಕರಣಂಗಳ್ನಾಲ್ವರು ಸಾಕ್ಷರ . . . . ಕೀರ್ಣ್ಣ ಕಳಾಪವನೀಜರ್ ‖ ೯ ‖
ಸ್ವಸ್ತಿ ಶ್ರೀಮತ್ರಿ -

46 ಭುವನಮಲ್ಲ ಬಿಜ್ಜಣದೇವವರ್ಷದ ೨ನೆಯ ಈಶ್ವರ ಸಂವತ್ಸರದ ಪುಷ್ಯ ಬಹುಳ ೮ ಬುಧವಾರ ವ್ಯತ
ರಾಯ -

47 ಣಸಂಕ್ರಮಣದನ್ದು ಶ್ರೀ ಮನ್ಮಹಾಪ್ರಧಾನಂ ಬೆಳ್ವಲನಾಡ ಪೆರ್ಗ್ಗಡೆ ದಂಡನಾಯಕ ಶ್ರೀಧರಯ್ಯಂ
ಗಳು ಶ್ರೀ -

48 ಕರಣ ರಾಜಾಧ್ಯಕ್ಷ ಭೀಮಣಯ್ಯನಾಯಕರುಂ ಬೊಪ್ಪಣಯ್ಯನಾಯಕರುಂ ಸೋಮಣಯ್ಯನಾಯ -

49 ಕರುಂ ಮೇಸುಗಿನಾಯಕರುಂ ಪ್ರಮುಖವಾಗಿ ಬೆಳ್ವಲನಾಡಂ ಶ್ರೀಭೋಗಾಭ್ಯನ್ತರಸುದ್ಧಿಯಿಂ ಸುಖಸಂ
ಕಥಾ ವಿನೋದದಿ -

50 ನಾಳುತ್ತಮಿರಲು ಶ್ರೀಮ[ದ್ದಕ್ಷಿ]ಣ ವಾರಣಾಸಿ ಶ್ರೀ ಧೋರೇಸ್ವರದೇವರ್ಗ್ಗೆ ದೇವರ ಪೂರ್ವ್ವ ತಳ
ವೃತ್ತಿಯ ಪೂ[ರ್ಜ್ಜಿಂ] ಬ್ರಹ್ಮ -

51 ಪುರಿಯಿಂದಂ ಮೂಡಲು ಮಂಟೂರ ಬಟ್ಟೆಯಿಂ ತೆಂಕಲು ಸಾಲೆಯರ ಕೇಸಿಯಣ್ಣನ ಕೆಯ್ಯಿಂದಂ ಪಡು
ವಲು

52 ಸೋವಿಸೆಟ್ಟಿಯ ಕೆಯ್ಯಿಂದಂ ಬಡಗಲು [ಚತುಸ್ಸೀಮಾ]ಸಂಶುದ್ಧಿಯಿಂ ದೇವರಂಗಭೋಗ ದೇಗುಲದ
ಜೀರ್ಣ್ಣೋದ್ಧಾರ -

53 ಖಂಡಸ್ಫುಟಿತಕ್ಕಂ ಶ್ರೀಮದ್ರಾಜಧಾನಿ[ಪಟ್ಟಣವಣ್ಣಿಗೆ]ಯ ೩೩ ಗೋಣು ಗಡಿಂಬದ ಗಳೆಯೊಳಳೆದು
ಸರ್ವ್ವ -

54 ಬಾಧಾಪರಿಹಾರಮಾಗೆ ಧಾರಾ[ಪೂರ್ವ್ವಕಂ] ಮಾಡಿ ಬಿಟ್ಟ ಮತ್ತರು ೨೦ ಇನ್ತೀ ಧರ್ಮ್ಮಮನಾರೋ
ರ್ವ್ವರು ದೇಶಾ -

55 ಧಿಕಾರಿಗಳುಂ ನಾಡ ಕರಣಂಗಳುಂ . . . . . ಪುರುಷರುಂ ಸಮಯಂಗಳುಂ ಪಂಚಾಳ
ರುಮರು ‖

56 ಸ್ವದತ್ತಾಂ ಪರದತ್ತಾಂ ವಾ ಯೋ . . . . . ಧರಾಂ ಷಷ್ಟಿರ್ವರ್ಷಸಹಸ್ರಾಣಿ ವಿಷ್ಠಾಯಾಂ
ಜಾಯ -

57 ಶೇ ಕ್ರಿಯಿಃ ‖ ಕಂದ ‖ ಜನನುತ . . . . . . ಶಾಸಿರ್ವ್ವರಿ . . . . . . ಕೆಯೊಳ್ಕಂಡ
ನಿಕಂ ಭೀಮೇಣ -

58 ವಿಬುಧಂ ಮನಸೋಸದೊಡೆ . . . . . . . . ಗೆ ‖ ಭೂವಿನಾಶ . . . ಲ್ಲರದೇವಂ
ಜೇನೆಸ್ಮರ್ಗ್ಗೇಜನಾತ -

59 ನಾತ್ಮಜನಾ ಸದ್ಭಾವದಿಂ ಕಣ್ಣಾರಿಸಿದನಾ . . . . ಕೀರ್ತ್ತಿ ನಿರುಪಮಂ ರಾಜೋವಜಂ
‖ ◎ ◎

## No. 97

(*B. K. No.* 104 *of* 1929-30)

MUTTAGI, BAGEVADI TALUK, BIJAPUR DISTRICT

On a slab lying on the proper right side of the Mallikārjuna temple

**Bijjaḷa, 1158 A.D.**

This is dated Śaka 1080, Bahudhānya, Vaiśākha-puṇṇami, Monday, lunar eclipse, correspoding to 1158 A.D., April 14, Monday, f.d.t. 47. The eclipse occurred, however, on Tuesday.

It records the renewal by the king of the gift of the village Nāgahura in the *kampaṇa* of Herbbāḷu Twelve to the god Śivaliṅga of Muttage, formerly bestowed by Chālukya Jagadēkamalla II. The gift was now renewed at the instance of Śrīdhara-daṇḍanātha governing Tarddavāḍi-nāḍu and entrusted into the hands of the teacher Lakuḷīśa, the *āchārya* of the temple. The succession of these teachers is given as follows: Kāśmīradēva, his disciple Kālabhairava, his disciple Yōgīśvara; his disciple Dharēśvaradēva; and his disciple Yōgīśvaradēva, the *guru* of Lakuḷīśa. Muttage is described as an excellent *agrahāra* and the first town in the *kampaṇa* of Muttage Thirty in the Tarddavāḍi-nāḍu. The record gives the genealogy of Śrīdhara-daṇḍanātha. It also records other gifts to the same deity by the *Karaṇas* of the above officer and Nāchiseṭṭi.

TEXT

1 ◈ ನಮಸ್ತುಂಗಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ
ಶಂಭವೇ । ◎ ಸ್ವಸ್ತಿ ಶ್ರೀಮದಶೇಷಲೋಕ

2 . . . . . . . . ಪ್ರದಂ ಜ್ಞಾನವಿನ್ಯಾಸಂ ಭಾಸುರನಿತ್ಯನಿರ್ಮ್ಮಳವರಂ[ಜ್ಯೋ]ತಿಸ್ವರೂ[ಪಂ]
ಶಿವಂ ಶಸ್ತ ಶ್ರೀ ಶಿವಲಿಂ . . . ನಚಳಂ ರಂಜಿ . . . . . . ಪ್ರಸ್ತುತ್ಯಂ ಪರಿಪಾಳಿಕೇ ಭುವನ-

3 [ವಂ] ಚಂದ್ರಾರ್ಕ್ಕತಾರಂಬರಂ ‖ ಶ್ರೀಸ್ತನಕಂಕುಮಾರುಣಿ[ತ] ರಂಜಿತಕೋಣಮಣಿಪ್ರಭಾಳಯಿಂ
[ಕೌಸ್ತುಭಮಿಂ]ದ್ರನೀಳಗಿರಿ . . ದೇವಾಳ . . ನೇಸರಂ . . . . . ದಿಂದ ವಕ್ಷದೊಳು ರ-

4 [ಕ್ಷಿಪನ]ಶೇಷಲೋಕಪಾಳಸು[ತ್ಯ] . . . ರಕ್ಷಿಸುಗಶೇಷಜಗಂಗಳ[ನಲ್ಲ] ಕೇಶವಂ ‖
ಶ್ರೀಮತ್ತೇಜೋನಿಧಾನಂ ವಿಮಳತರವರಂಜೋತಿತತ್ವಸ್ವರೂಪಂ [ಶ್ರ್ಯ]ಮೂರ್ತ್ತಿ ಜ್ಞಾನಮೂರ್ತ್ತಿ

5 . . . ತಾನಂದಮೂರ್ತ್ತಿ [ತ್ರಿಲೋಕ]ಸ್ವಾಮಿ ಪ್ರತ್ಯಕ್ಷದೈವಂ ದಿವಿಜಗಣನುತಂ ವಿಶ್ವಲೋಕೈಕ
ನೇತ್ರಂ ಬ್ಯೋಮಾಳಂಕಾರಮುತ್ಪ್ರಹಮನಖಿಳಜಗಕ್ಕೀಗೆ ಪಂಕೇಜಮಿತ್ರಂ ‖

6 ಶ್ರೀಕಳಚುರಿಯಾನ್ವಯ[ರತ್ನಾ]ಕರಸಂಪ್ರಿದ್ಧಿಕರಸಮುದ್ಗತಪೂರ್ಣ್ನಸುಧಾಕರಬಿಂಬ[ಂ] ನೆಗಳ್ದಂ
ಲೋಕೈಕಸ್ತುತ್ಯನೆನಿಸಿ ಪೆರ್ಮ್ಮಾಡಿನೃ[ಪಾ]ಳಕಂ । ಶ್ರೀ ಕಳಚುರ್ಯ್ಯವಂಶತಿಳಕಂ

7 [ಪೆರ್ಮ್ಮಾಡಿ]ದೇವಂ ಧರಿತ್ರಿಗೆ ರಕ್ಷಾರ್ತ್ಥದೆ ಸಾಕ್ಷಾದ್ಧ್ವಜನೆ ಬಂದಿರ್ಪಂತಿರಿರ್ದ್ದಂ ಸುವರ್ಣಗರೇಂದ್ರ
ಧ್ವಜನಿಧ್ಧರಾವಳಯಮಂ ಕಾರುಣ್ಯದಿಂ ಪಾಳಿಸುತ್ತ ಗಜೇಂದ್ರಾರಿ ಪರಾಕ್ರಮಂ ಜನನುತಂ ಶ್ರೀ ಮಾ -

8 [ನ] ಡೇಮಾ[ಡ]ಳಂ ‖ . . . . . . . . . . . . ಮಹೇಶನ ಕೋಪಾನನದಲ್ಲಿ
ದಿಳ್ಳಿಸುಂ . . ವುಗ್ರಾಭೀಳ ಲಲಾಟಲೋಚನದುರುದ್ಗತಮಾದುದಂತನೆ -

9 ಪೆರ್ಮ್ಮಾಡಿದೇವಂಗೆ ನಂದನನೀ ಬಿಜ್ಜಳದೇವನೂರ್ಜ್ಜಿತಯಶಂ ವೈರೀಭ[ಕಂಠೀ]ರವಂ ಬಳವದಂತಿ
ಪಂಕ[ಮಹೋದಧಿ]ಭೂಮಿ . . . . . . . . . ಕ್ಷೋಭಿ

10 . . . [ಮನದಪನದಾ]ನಾನಳಂ . . . . . . . . . . . . ಬಿಜ್ಜಳನೃಪನೆ
. . . . . . . . [ರಾ]ಮನೋಳ್ ‖ ವಿಶ್ವಧಾತ್ರಿಯೊ -

